# ಡಾ: ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು

## ಶ್ರೀ ಸಿದ್ಧಗಂಗಾ ಮಠ

### ಪತ್ರಿಕಾ ಹೇಳಿಕೆ.

ಶ್ರೀ ಸಿದ್ಧಗಂಗಾ ಕ್ಷೇತ್ರದ ಬಗ್ಗೆ ಕಳೆದ ಒಂದು ವರ್ಷದಿಂದ ಆಗಾಗ್ಗೆ ಪತ್ರಿಕೆಗಳಲ್ಲಿ ಬರುತ್ತಿರುವ ಸುದ್ದಿಗಳನ್ನು ಓದಿ ನಾಡಿನ ಲಕ್ಷಾಂತರ ಅಭಿಮಾನಿಗಳು ತುಂಬ ನೊಂದು ಕೊಂಡಿದ್ದಾರೆ. ಭಕ್ತಾದಿಗಳ ಶ್ರದ್ಧಾಭಿಮಾನಗಳನ್ನೇ ಆಸ್ತಿಯಾಗಿಟ್ಟು ಕೊಂಡು ಬಂದ ನಮ್ಮ ಮಠಕ್ಕೆ ಇಂತಹ ಕಷ್ಟಪರಿಸ್ಥಿತಿ ಒದಗಿದದು ಅತ್ಯಂತ ದುರಾದೃಷ್ಟದ ಸಂಗತಿ. ಇದು ಒಂದು ಅಗ್ನಿಪರೀಕ್ಷೆಯ ಕಾಲವೆಂದೇ ನಾವು ಭಾವಿಸಿದ್ದೇವೆ.

ಈ ಸಂಬಂಧ ಮತ್ತೆ ಮತ್ತೆ ಪತ್ರಿಕಾ ಹೇಳಿಕೆಯನ್ನು ನೀಡಿ ಅಥವಾ ಸಭೆ ಸಮಾರಂಭಗಳ ವೇದಿಕೆಗಳಲ್ಲಿ ಪ್ರಸ್ತಾಪಿಸಿ ಜನ ಮನದಲ್ಲಿ ಗೊಂದಲವನ್ನುಂಟು ಮಾಡಬಾರದೆಂದು ನಾವು ಮೌನವಹಿಸಿದ್ದರೂ ಆಗಾಗ ಹೃದಯ ಕಲಕುವ ಅಶಾಂತಿಯ ಕಿಡಿಗಳು ಕಾಣಿಸಿಕೊಂಡು ಪರಿಸ್ಥಿತಿ ಹದಗೆಡುತ್ತಿರುವುದನ್ನು ಗಮನಿಸಿ ಅನಿವಾರ್ಯವಾಗಿ ಈ ಹೇಳಿಕೆ ನೀಡುತ್ತಿದ್ದೇವೆ.

ಮಠಮಾನ್ಯಗಳು, ದೇವಾಲಯಗಳು, ಧರ್ಮ ಸಂಸ್ಥೆಗಳು, ಮೊದಲಾದ ಕ್ಷೇತ್ರಗಳಲ್ಲಿ ಯಾವುದಾದರೂ ಸಮಸ್ಯೆ ಉದ್ಭವಿಸಿದಾಗ ಅತ್ಯಂತ ಸೂಕ್ಷ್ಮ ಪರಿಸ್ಥಿತಿ ಉಂಟಾಗುವುದು ಸಹಜ. ಆದರೆ ಆ ಪರಿಸ್ಥಿತಿಯನ್ನು ಸುಧಾರಿಸಲು ಬೇಕಾದ ವಾತಾವರಣವನ್ನು ಉಂಟುಮಾಡುವುದು ಪ್ರತಿಯೊಬ್ಬರ ಕರ್ತವ್ಯ. ಅದರಲ್ಲೂ ಮಠದ ಅಭಿಮಾನಿಗಳಂತೂ ಈ ಬಗ್ಗೆ ಪೂರ್ಣ ಸಂಯಮದಿಂದ ನಡೆದುಕೊಳ್ಳಬೇಕು.

ಈಗ ಉಂಟಾಗಿರುವ ಬಗ್ಗೆ ನಾವು ಹಗಲಿರುಳು ಚಿಂತಿಸುತ್ತಿದ್ದೇವೆ. ಮಠದ ನೆಮ್ಮದಿಯನ್ನು ಹಾಳುಮಾಡಿ ಇಲ್ಲಿ ಆಶ್ರಯಪಡೆದಿರುವ ಸಹಸ್ರಾರು ಬಡ ವಿದ್ಯಾರ್ಥಿಗಳ ಅಧ್ಯಯನಕ್ಕೆ ಅಡ್ಡಿಯುಂಟುಮಾಡುವುದು, ನಡೆಯುತ್ತಿರುವ ಜನಹಿತ ಕಾರ್ಯಗಳಿಗೆ ತೊಂದರೆ ಮಾಡುವುದು ಯಾರಿಗೂ ಶೋಭೆ ತರುವ ವಿಷಯವಲ್ಲ.

(3ನೇ ರಕ್ಷಾಪುಟ ನೋಡಿ)

# ಸಿದ್ಧಗಂಗಾ

ಸಂಪುಟ–೨೨ ಸಂಚಿಕೆ–೧೨ ಡಿಸೆಂಬರ್, ೧೯೮೬


## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮನೆಗೆ ಕದವಿರುವಂತೆ ಮನಕೆ ಕದವೊಂದಿರಲಿ
ಅನುವು ಆಪತ್ತಿಗೆ ತೆರೆದಿರಲಿ। ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ತನುವೆ ಧೂಪದಕುಂಡ ಮನವೆ ಪಂಚಾರತಿ
ಅನುದಿನವು ಸ್ವಾಮಿ ಬೆಳಗುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

"ಶರಣರ ಬರವೆನ್ನ ಪ್ರಾಣ ಜೀವಾಳ"
ಗುರುದೇವ ನೀನೆನ್ನ ಒಡಲಾಳ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ


| ಲೇಖನದ ಹೆಸರು | ಲೇಖಕರ ಹೆಸರು | ಪುಟ |
|---|---|---|
| * ಶ್ರೀವಾಣಿ | | 5 |
| * ಸಂಪಾದಕೀಯ | | 7 |
| * ಮಾಣಿಕ್ಯ ದೀಪ್ತಿ | —ವಿದ್ವಾನ್, ಎಸ್. ಷಡಕ್ಷರಿ | 9 |
| * ಬಸವ ಪ್ರತಿಜ್ಞಾ | —ಟಿ. ಎನ್. ಮಹಾದೇವಯ್ಯ | 11 |
| * ನಾಮಜಪದ ಮಹಿಮೆ (ಮುಂದುವರಿದಲೇಖನ) | —ದೇವೇಂದ್ರಪ್ಪ ಮಹದೇವಪ್ಪ ಬಡಿಗೇರ | 15 |
| * ಪುಣ್ಯಕ್ಷೇತ್ರಗಳು —ಬನವಾಸಿ | —ಪಂಡಿತ, ಕೆ. ಪಿ. ಶಿವಲಿಂಗಯ್ಯ | 21 |
| * ಮಾನವ ಧರ್ಮ | —ಕೆ. ಎಸ್. ಸ್ವಾಮಿ | 27 |
| * ಸೋಮರಸ | —ಹೆಚ್. ರೇವಣಸಿದ್ದಪ್ಪ | 29 |
| * ಕುಷ್ಠರೋಗ ಒಂದು ಸಾಮಾಜಿಕ ಪಿಡುಗು | —ಸಿದ್ದಗಂಗಪ್ಪ | 31 |
| * ಕಾನಾಮಡುವಿನ ಶ್ರೀ ಶ್ರೀ ಶರಣಾರ್ಯ ಸ್ವಾಮಿಗಳು | —ಬಿ. ನಂಜುಂಡಪ್ಪ | 38 |
| * ಜೀವನ | —ಇಂದುಮತಿ ಹಿರೇಮಠ | 43 |
| * ಗ್ರಾಮಾಂತರಬಸವಜಯಂತಿ | —ಹೆಚ್. ವಿ. ವೀರಭದ್ರಯ್ಯ | 47 |



# ಶ್ರೀವಾಣಿ

"Let your aspiration is high" ನನ್ನ ಭಾವನೆಗಳು ಉದಾರವಾಗಿರಲಿ ಎಂದಿದ್ದಾರೆ ಶ್ರೀ ಸ್ವಾಮಿ ವಿವೇಕಾನಂದರು. ಮನಸ್ಸಿನಲ್ಲಿ ಹುಟ್ಟಿ ಬೆಳೆವ ಭಾವನೆಗಳು ಉನ್ನತವಾಗಿರಬೇಕು ಎಂಬ ಆಶಯ. "ಮನವನ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂಬಂತೆ ಇಹಪರ ಸಾಧನಕ್ಕೆ ಮನಸ್ಸೇ ಕಾರಣ. ಮನದಲ್ಲಿ ಹುಟ್ಟಿ ಬೆಳೆದ ಭಾವನೆಗಳು ಕಾರಣ. ಬೆಳೆದುಬಂದ ಸನ್ನಿವೇಶ, ತಿರುಗಾಡುವ ಸಹವಾಸ ಮತ್ತು ತೆಗೆದು ಕೊಳ್ಳುವ ಆಹಾರ ಪಾನೀಯಗಳ ಮೇಲೆ ಭಾವನೆಗಳು ಅವಲಂಬಿಸಿರುತ್ತವೆ. "ಯದ್ಭಾವಂ ತದ್ಭವತಿ' ಎಂಬಂತೆ ಭಾವನೆಗೆ ತಕ್ಕಂತಹ ಕಾರ್ಯಾಚರಣೆ ಕಾಣಬಹುದಾಗಿದೆ. ವ್ಯಕ್ತಿತ್ವದ ಪ್ರತಿಬಿಂಬಗಳಿರುತ್ತವೆ. ಒಬ್ಬ ವ್ಯಕ್ತಿಯಾಗಲಿ ಒಂದು ಕುಟುಂಬದ ಮುಖ್ಯನಾಗಲಿ, ಒಂದು ಸಂಘ ಸಂಸ್ಥೆಯ ಅಧ್ಯಕ್ಷನಾಗಲಿ, ಮತ್ತು ಒಂದು ರಾಷ್ಟ್ರದ ಅತ್ಯುನ್ನತ ಪ್ರಜೆಯಾಗಲಿ ಈ ಬಗ್ಗೆ ಉದಾಸೀನ ಮಾಡದೆ ಎಚ್ಚರ ವಹಿಸಬೇಕಾಗುತ್ತದೆ. ಒಬ್ಬ ವ್ಯಕ್ತಿಯ ಕೀಳರಿಮೆ. ಅದನ್ನವಲಂಬಿಸಿದ ಕ್ಷುಲ್ಲಕ ಭಾವನೆಗಳ ಪರಿಣಾಮ ಕೇವಲ ವ್ಯಕ್ತಿಗೆ ಸೀಮಿತವಲ್ಲ. ಸುತ್ತಲ ಪರಿಸರವನ್ನೇ ಕಲುಷಿತಗೊಳಿಸುತ್ತದೆ. ಇಡೀ ಸಮಾಜ ಮತ್ತು ರಾಷ್ಟ್ರಕ್ಕೇ ಈ ಸೋಂಕು ತಗಲುತ್ತದೆ. ಹಣ, ಆಸ್ತಿ, ಪಾಸ್ತಿ, ಮಾನ ಪ್ರಾಣಹಾನಿಗೆ ಕಾರಣವಾಗುತ್ತದೆ ಸಮಸ್ತರ ನೆಮ್ಮದಿಗೆ ಭಂಗ ತರುವ ಈ ಪೈಶಾಚಿಕ ಭಾವನೆ ಮಾನವ ಸಹಜವಾದ ಭಾವನೆಯಲ್ಲ. ಆದ್ದರಿಂದ ಸಮಸ್ತರ ಉಳಿವಿನಲ್ಲಿ ತನ್ನ ಉಳಿವಿದೆ ಎಂದು ಭಾವಿಸದೆ, ಅಶಾಂತ ವಾತಾವರಣ ಸೃಷ್ಟಿಸಿ ನೆಮ್ಮದಿ ಕಾಣುವುದು ದುಸ್ತರ. ಅದು ಕೇವಲ ಬರಿ ಭ್ರಮೆ. ಹುಚ್ಚು ಕಲ್ಪನೆ. ಮಾನವನಾಗಿ ಹುಟ್ಟಿದ ಮೇಲೆ ಮಾನವನಾಗಿ ಬೆಳೆಯಬೇಕೆ ವಿನಃ ಮೃಗವಾಗಿ ಬದುಕುವುದಲ್ಲ. ಅವನ ಒಂದೊಂದು ಭಾವನೆಯೂ ಮಾನವ ಕಲ್ಯಾಣಕ್ಕೆ ಮೀಸಲಾಗಬೇಕು. ಏನಾಗುವುದಕ್ಕೆ ಮೊದಲು ಮಾನವನಾಗಿ ಬದುಕುವ ಭಾವನೆಗಳು ಬೇಕು. ಪ್ರಯುಕ್ತ ಉತ್ತಮ ಸಂಸ್ಕಾರ ಯೋಗ್ಯ ವಾತಾವರಣ, ಜೀವನದಲ್ಲಿ ಅನುಕೂಲವಾಗಿ ದೊರೆಯುವಂತಾಗಬೇಕು. ವ್ಯಕ್ತಿತ್ವ ವಿಕಸನಕ್ಕೆ ಸದ್ಭಾವನಾಯುಕ್ತ ಸಂಸ್ಕಾರಗಳ ಮಾರ್ಗದರ್ಶನ ಅಗತ್ಯವಾಗಬೇಕು. ಈ ಉದಾತ್ತ ಭಾವನೆಗಳನ್ನು ಬಿತ್ತುವ ಯೋಗ್ಯರ ಸಂಪನ್ನರ ಸಹವಾಸವೂ ಬೇಕು. ಆಗಲೇ ನೆಮ್ಮದಿ ಶಾಂತಿ ಸಮೃದ್ಧಿ. ●

# "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಟಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.


"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಒಂದು ವಿನಯ ಪೂರ್ವಕ ಪ್ರಾರ್ಥನೆ:—

ಶ್ರೀಮಠದ ಪ್ರಕರಣದ ಬಗ್ಗೆ ಹಬ್ಬಿರುವ ವದಂತಿಗಳು, ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಕೆಲವು ಸುದ್ದಿಗಳು, ನಡೆದಿರುವ ವಿದ್ಯಮಾನಗಳನ್ನು ಗಮನಿಸಿದಾಗ ಆನೆ ಮುಟ್ಟಿದ ಕುರುಡರ ಕಥೆ ನೆನಪಾಗುತ್ತದೆ. ಯಾವುದು ಸತ್ಯ? ಯಾವುದು ಮಿಥ್ಯ? ಎಂಬುದನ್ನು ನಿರ್ಣಯಿಸುವಲ್ಲಿ ತಮ್ಮ ಬುದ್ಧಿದ್ರವ್ಯವನ್ನೆಲ್ಲ ವೆಚ್ಚಮಾಡುವ ಪ್ರಯತ್ನಗಳೂ ನಡೆದಿವೆ. ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರಸ್ವಾಮಿಗಳವರು ಪತ್ರಿಕಾ ಹೇಳಿಕೆ ನೀಡಿ ಕಾಲಾವಕಾಶ ಬೇಕೆಂದು ಅಪೇಕ್ಷಿಸಿದ್ದರೂ ಸಹನೆ, ಸೌಜನ್ಯಗಳು ವ್ಯಕ್ತವಾಗುತ್ತಿಲ್ಲ.

ಈ ಮಧ್ಯೆ 'ಆಸ್ತಿ ಬಿಟ್ಟುಕೊಡುತ್ತೇನೆ', 'ಪ್ರಾಣಾರ್ಪಣೆ ಮಾಡುತ್ತಾರೆ', 'ಹಿರಿಯಸ್ವಾಮಿಗಳು ಪದತ್ಯಾಗಮಾಡುತ್ತಾರೆ'— ಎಂಬ ಸುದ್ದಿಗಳು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ. ಆಸ್ತಿ ಬಿಟ್ಟು ಕೊಡುವವರಿಗೆ, ಪ್ರಾಣಾರ್ಪಣೆ ಮಾಡುವವರಿಗೆ ಒಂದು ಕಿವಿಮಾತು. ಆವೇಶದ ಮಾತುಗಳು ಸಮಸ್ಯೆಯನ್ನು ಬಗೆಹರಿಸಲಾರವು. ಅದಕ್ಕೆ ಶಾಂತವಾಗಿ ನಿರ್ವಿಕಾರವಾಗಿ ಆಲೋಚನೆ ಮಾಡುವ ತಾಳ್ಮೆಬೇಕು. ಅದಕ್ಕೂ ಹೆಚ್ಚಿನದಾಗಿ ಹೃದಯವಂತಿಕೆಬೇಕು. ಪರಮ ಪೂಜ್ಯ ಶ್ರೀ ಶ್ರೀಗಳವರಿಗೆ "ಗಡುವು" ಕೊಡುವ, ಒತ್ತಾಯ ತರುವ, ಬೆದರಿಕೆ ಹಾಕುವ ತಂತ್ರಗಳಿಂದ ಮುಂದುವರಿಯುವುದು ಯಾವುದೇ ನಾಗರಿಕ ಧಾರ್ಮಿಕ ಪ್ರಜ್ಞೆಯುಳ್ಳ ಸಮಾಜಕ್ಕೆ ಶೋಭೆ ತರುವಂತಹುದಲ್ಲ. ಪೂಜ್ಯ ಶ್ರೀ ಶ್ರೀಗಳವರು ಕಟ್ಟಿದ ಧರ್ಮಸೌಧ ಒಂದು ದಿನದಲ್ಲಿ ನಿರ್ಮಾಣವಾದುದಲ್ಲ. ಆರು ದಶಕಗಳ ಬೆವರಿನ ಪ್ರತೀಕ. ಒಂದು ವಿನಯ ಪೂರ್ವಕ ಪ್ರಾರ್ಥನೆ ಆಸ್ತಿಬಿಟ್ಟುಕೊಡುವ, ಪ್ರಾಣಾರ್ಪಣೆಗೆ ಸಿದ್ಧವಿರುವ ಪುಣ್ಯಾತ್ಮರು ಪರಮ ಪೂಜ್ಯರು ನಡೆಸಿಕೊಂಡು ಬಂದಿರುವ ವಿದ್ಯಾರ್ಥಿನಿಲಯದಿಂದ ನೂರಿನ್ನೂರು ಬಡವಿದ್ಯಾರ್ಥಿಗಳನ್ನು ವಹಿಸಿಕೊಂಡು ಅವರ ವಿದ್ಯಾಭ್ಯಾಸದ ಪೂರ್ಣಾವಧಿಯವರೆಗೆ ಅಶನವಸನಗಳನ್ನಿತ್ತು ಪೋಷಿಸುವಷ್ಟು ಚೆನ್ನ! ಅದರಿಂದ ಸಮಾಜಸೇವೆಯಾಗಲಾರದೆ? ಸಮಿತಿಗಳ ಹೆಸರಿನಲ್ಲಿ ಸಮ್ಮೇಳನ, ಸಭೆ, ಸಮಾರಂಭಗಳನ್ನು ಕರೆದು ಗ್ರಾಮೀಣ ಬಂಧುಗಳ ಮುಗ್ಧಮನಸ್ಸಿನಲ್ಲಿ ಗೊಂದಲವನ್ನುಂಟುಮಾಡುವುದಕ್ಕಿಂತ ಇದು ಪುಣ್ಯದಾಯಕವಲ್ಲವೆ? ಪತ್ರಿಕಾ ಹೇಳಿಕೆಗಳನ್ನು

ನೀಡಿರುವುದರಿಂದ ಯಾವ ಪುರುಷಾರ್ಥ ಸಾಧನೆಯಾದೀತು ! "ಸೇವಾಹಿ ಪರಮೋ ಧರ್ಮಃ" ಎಂದಲ್ಲವೆ ದೊಡ್ಡವರ ವಾಣಿ. ಸೇವೆ ಮಾಡುವ "ಮನಸ್ಸುಗಳಿಗೆ" ಇದೇಕೆ ತಿಳಿಯಬಾರದು ? ಸೇವೆಯಲ್ಲಿ ಲಭ್ಯವಾಗುವ ಆತ್ಮ ಸಂತೋಷ ಸವಾಲು ಹೆದರಿಕೆ, ಬೆದರಿಕೆಗಳಲ್ಲಿ ಲಭ್ಯವಾಗಲಾರದು; ಅದರಿಂದ ಸಮಾಜಕ್ಕೆ ಒಳ್ಳೆಯ ದಾಗದು.

ತಿಳಿಯಾದ ಮನಸ್ಸು, ಒಳಿತಾದ ಚಿಂತನೆ ಇನ್ನಾದರೂ ಮೂಡಿ ಬರಲೆಂದೇ ಹಾರೈಕೆ

# ಶ್ರದ್ಧಾಂಜಲಿ

ದಿನಾಂಕ 6-12-86 ರಂದು ಸುತ್ತೂರು ವೀರ ಸಿಂಹಾಸನಾಧೀಶ್ವರ ಜಗದ್ಗುರು ರಾಜ ಗುರು ತಿಲಕ ಪರಮ ಪೂಜ್ಯ ಶ್ರೀ ಶ್ರೀ ಶಿವ ರಾತ್ರಿ ರಾಜೇಂದ್ರ ಮಹಾ ಸ್ವಾಮಿಗಳು ಲಿಂಗೈಕ್ಯ ರಾದುದನ್ನು ತಿಳಿದು ಅಪಾರ ದುಃಖ ವಾಗಿದೆ. ಪೂಜ್ಯರು ನಾಡಿಗೆ ಸಮಾಜಕ್ಕೆ ಶೈಕ್ಷಣಿಕ, ಸಂಸ್ಥೆಗಳನ್ನು ನಡೆಸುವುದರ ಮೂಲಕ ಮತ್ತು ಉಚಿತ ವಿದ್ಯಾರ್ಥಿನಿಲಯ ಗಳನ್ನು ನಡೆಸುತ್ತಾ ಮಹೋಪಕಾರ ಮಾಡುತ್ತಿದ್ದರು. ಅವರ ಅಗಲಿಕೆಯಿಂದ ತುಂಬಲಾರದ ನಷ್ಟ ನಾಡಿಗೆ ಮತ್ತು ಸಮಾಜಕ್ಕೆ ಉಂಟಾಗಿದೆ. ಪೂಜ್ಯರ ದಿವ್ಯಾತ್ಮಕ್ಕೆ "ಸಿದ್ಧಗಂಗಾ" ಭಕ್ತಿಪೂರ್ವಕ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

—ವಿದ್ವಾನ್ ಎಸ್. ಷಡಕ್ಷರಿ, BSc.M.A.,BEd
ಉಪ-ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು

## ಕಾಯಕ

ಜೀವನದ ಹೊರವಲಯದಲ್ಲಿ ಅಡ್ಡಾಡುವಾಗ, ಮನೆಮಠ ಕಾಯಕಗಳ ಅರಿವಿಲ್ಲದೆ, ಊರ ದೇವಾಲಯಗಳ ಮುಂದೆ, ಅರಳಿಕಟ್ಟೆಯ ಮೇಲೆ, ರಸ್ತೆಗಳ ವೃತ್ತದ ಚೌಕಟ್ಟಿನ ಮೇಲೆ, ಉದ್ಯಾನಗಳ ಮರದ ನೆರಳಿನಲ್ಲಿ ಹೀಗೆ ಹಲವಾರು ಕಡೆ ಕುಂತು, ನಿಂತು ನಿತ್ಯವೂ ವ್ಯರ್ಥವಾಗಿ ಹರಟೆ ಹೊಡೆಯುವುದು, ಶ್ರಮಜೀವಿಗಳ ಬಗ್ಗೆ ಕುಂತು ಅಸೂಯೆ ಮಾತನಾಡುವುದು, ಸೋಮಾರಿಗಳಾಗಿ ಕುಳಿತು ಕಾಲಕಳೆಯುವುದು, ಸಾಲವಾದರೂ ಮಾಡಿ ಕುಡಿದು ಮಲಗುವುದು, ಇತ್ಯಾದಿ ಜೀವನದ ಮೌಲ್ಯವನ್ನು ಹಾಳುಮಾಡಿಕೊಳ್ಳುತ್ತಿರುವ ಜನ ಇವತ್ತಿನ ಸಮಾಜದಲ್ಲಿ ಉಂಟು. ದೃಢಕಾಯರಾದ ಈ ಬುದ್ಧಿಜೀವಿಗಳ ಶಕ್ತಿ ಯಾವುದಾದರೊಂದು ಸತ್ಯ–ನಿತ್ಯ "ಕಾಯಕ" ದಲ್ಲಿ ತೊಡಗಿಸಿದರೆ ಸಮಾಜದ ಸರ್ವತೋಮುಖ ಪ್ರಗತಿ ಸಾಧ್ಯವಾದೀತು.

ಇಲ್ಲಿ 'ಕಾಯಕ' ಎಂಬ ಶಬ್ದದ ಮಹತ್ವವನ್ನು ತಿಳಿಯಬೇಕಾದುದು ಅನಿವಾರ್ಯವೆನಿಸುತ್ತದೆ. ಕಾಯಕವೆಂದರೆ–ಕೆಲಸ–ಉದ್ಯೋಗ–ಕಸುಬು ಎಂತಲೂ ಅರ್ಥವಿಟ್ಟುಕೊಳ್ಳಬಹುದು. ಜೀವನದಲ್ಲಿ ಯಾವುದಾದರೊಂದು ಉದ್ಯೋಗ ಅಥವಾ ಕಾಯಕದಲ್ಲಿ ತೊಡಗದ ವ್ಯಕ್ತಿಯ ಜೀವನ ಹಾಳು ದೇಗುಲವಿದ್ದಂತೆ ನಿರರ್ಥಕ. ಕಾಯಕ ನಿರತನಾಗದ ವ್ಯಕ್ತಿಯು ನಾಶವಾಗುವುದಲ್ಲದೆ ಇವನಿಂದ ಕುಟುಂಬ, ಸಮಾಜ, ಕೊನೆಗೆ ರಾಷ್ಟ್ರವೂ ಹಾಳಾಗಿಹೋಗುತ್ತದೆ. ವ್ಯಕ್ತಿಯ ಬಾಳು ಹಾಳಾಗುವುದಲ್ಲದೆ, ಅವನಲ್ಲಿ ತಾಳ್ಮೆ ಕಡಿಮೆಯಾಗಿ ಜೀವನವೆಲ್ಲವೂ ಕೆಸರಿನಲ್ಲಿ ಬಿದ್ದ ಪಶುವಿನಂತೆ ಅನರ್ಥವಾಗುತ್ತದೆ ಕಾಯಕವಳಿದ ಠಾವಿನಲ್ಲಿ ಜೀವನದ ಸುಳಿವುಂಟೆ? ಎಂಬ ಶರಣರ ಮಾತು ಇದೇ ಅಭಿಪ್ರಾಯವನ್ನು ಸಾರುತ್ತದೆ.

ಆದ್ದರಿಂದ ಯಾವುದೇ ಒಬ್ಬ ವ್ಯಕ್ತಿ ಜೀವನವನ್ನು ಪರಿಶುದ್ಧಗೊಳಿಸಿಕೊಳ್ಳಲು ಕಾಯಕವು ಮಹತ್ತರವಾದ ಸಾಧನ. ಸೋಮಾರಿತನವನ್ನು ದೂರಮಾಡಿ ಬಾಳ ಬೆಳಕ ತೋರುವ ದಿವ್ಯಜ್ಯೋತಿ ಈ ಕಾಯಕ ಕಾಯಕವು ಕರ್ಮಭೂಮಿ ಅಥವಾ ಭಾವಭೂಮಿಯ ಮೇಲೆ ಸುಮಧುರ ಫಲಗಳನ್ನು ನೀಡುತ್ತದೆ ನೇಮನಿಷ್ಠೆಯುಳ್ಳ

ತನ್ನ ಕಾಯಕದಿಂದ ವ್ಯಕ್ತಿಯು ಯಾವುದೇ ವ್ಯಾಮೋಹಕ್ಕೆ ಒಳಗಾಗಲಾರ. ಇದ ರಿಂದ ಅವನ ಬಾಳಕಾರ್ಗತ್ತಲು ದೂರ ಸರಿಯುತ್ತದೆ. ಚಿತ್ತ ಮತ್ತು ಭಾವಗಳು ಶುದ್ಧಿಯಾಗುತ್ತವೆ. ಬೌದ್ಧಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ತೊಡಗಲು ಅನು ವಾಗುತ್ತವೆ. ಈ ಕಾಯಕದಿಂದ ಶಾರೀರಿಕ ಅವಗುಣಗಳು ನಷ್ಟವಾಗಿ ಬುದ್ಧಿಭಾವ ಗಳು ಪುಷ್ಟಿಗೊಂಡು, ಜೀವನದಲ್ಲಾಗಲಿ, ವ್ಯವಹಾರದಲ್ಲಾಗಲಿ, ಬರುವ ಕಷ್ಟಗಳು ದೂರವಾಗಿ ಆತ್ಮ ಪ್ರಗತಿಗೆ ರಹದಾರಿಯಾಗುತ್ತದೆ. ಸತ್ಯ–ಪ್ರಾಮಾಣಿಕತೆಯು ಮೈಗೂಡಿ ಜೀವನದಲ್ಲಿ ಮುಕ್ತಿ ಸಿಗುತ್ತದೆ ಎಂಬುದಕ್ಕೆ ಅನೇಕ ಸಾಧಕರ–ಸಿದ್ಧ ಪುರುಷರ ನಿದರ್ಶನಗಳು ಇತಿಹಾಸದಲ್ಲಿ ಕಂಡು ಬಂದಿವೆ.

ಅಂದಮೇಲೆ ಎಲ್ಲರಿಗೂ ಒಂದೇ ರೀತಿಯ ಕಾಯಕವಿರಬೇಕೆಂಬ ನಿಯಮವಿಲ್ಲ. ಎಲ್ಲರೂ ನಿರುದ್ಯೋಗಿಗಳಾಗದೆ, ಏನಾದರೊಂದು ಜೀವನ ಸಾಗಿಸುವ ಶುದ್ಧ ಕಾಯಕ ವನ್ನು ಮಾಡುತ್ತ ನಡೆದರೆ ಬಹುಶಃ ನಾಡಿನಲ್ಲಿ ಬಡತನ ಉದ್ಭವಿಸಲಾರದು ರಾಷ್ಟ್ರದ ಆರ್ಥಿಕ ಭದ್ರತೆಯು ನೆಲೆಗೊಂಡೀತು. "ಉದ್ಯೋಗಿನಂ ಪುರುಷ ಸಿಂಹ ಮುಪೈತಿ ಲಕ್ಷ್ಮೀಃ" ಕಾಯಕನಿರತನಿಗೆ ಆಯುರಾರೋಗ್ಯ ಭಾಗ್ಯ ತಾನಾಗಿಯೇ ವೃದ್ಧಿಯಾಗು ತ್ತದೆ

ಕಾಯಕ ಕೇವಲ ನಾಟಕೀಯವಾಗಬಾರದು. ಇದರಲ್ಲಿ ಸ್ವಹಿತ, ಪರಹಿತಗಳೂ ಇರಬೇಕು ಕಾಯಕವೆಂಬುದೊಂದು ಪ್ರಾಯೋಗಿಕ ತಪಸ್ಸು. ಈ ತಪಸ್ಸಿನಲ್ಲಿ ತೊಡಗಿದವರಿಗೆ ಭವಬಂಧನಗಳು ದೂರವಾಗುತ್ತವೆ. ತನುಮನಗಳು ಮಂಗಳಕರ ವಾಗುತ್ತವೆ. ಮಾನವನ ಅಂತರಿಕ ಮತ್ತು ಭೌತಿಕ ಸಂಪತ್ತು ಅಭಿವೃದ್ಧಿಯಾಗಿ ದೈವೀಶಕ್ತಿಯನ್ನು ಪಡೆಯಲು ಈ ಕಾಯಕವೇ ಕಲ್ಪತರು ಇದು ಉತ್ತಮ ಸಂಸ್ಕೃತಿ ಯನ್ನು ಮತ್ತು ಚೈತನ್ಯ ಶಕ್ತಿಯನ್ನು ಕೊಡುವ ಸೌಮ್ಯಸಾಗರ. ಎಲ್ಲ ರೀತಿಯ ದಾರಿದ್ರ್ಯವನ್ನು ಹೋಗಲಾಡಿಸುವ ಕಾಮಧೇನು. ಆದರೆ ನಾವು ಕೈಗೊಳ್ಳುವ ಕಾಯಕವು ಸರ್ವಾದರಣೀಯವಾಗಿದ್ದು ಪಾವಿತ್ರತೆ ಮತ್ತು ಪ್ರಾಮಾಣಿಕತೆಗಳಿಂದ ಕೂಡಿದ್ದಾದರೆ ಸಮಾಜಶಕ್ತಿ ಬಲಿಯುತ್ತದೆ ಅನೇಕ ತಾಮಸೀಯ ಕಚ್ಚಾಟಗಳು ತಪ್ಪುತ್ತವೆ

ಇಲ್ಲಿ ಮುಖ್ಯವಾಗಿ ಒಂದು ಮಾತನ್ನು ಹೇಳುವುದಾದರೆ, ಗುರುವಾಗಲಿ, ಜಂಗಮನಾಗಲಿ, ರಾಜನಾಗಲಿ, ಫಕೀರನಾಗಲಿ, ಯಾವ ವರ್ಗದವರಾದರೂ "ಕಾಯಕದಿಂದಲೇ ವೇಷದ ಪಾಶವು ಹರಿವುದು, ಕಾಯಕದಿಂದಲೇ ಶಿಲೆಯ ಕುಲ ಹರಿವುದು". ಎಂಬ ಶರಣರ ಎಚ್ಚರಿಕೆಯ ಮಾತನ್ನು ಮೈಗೂಡಿಸಿಕೊಂಡರೆ ಜೀವನ ಪಾವನವಾದೀತು.

ಸಿದ್ಧಗಂಗಾ

# ಬಸವ ಪ್ರತಿಜ್ಞಾ

—ಟಿ. ಎಸ್. ಮಹದೇವಯ್ಯ.

"ಅಣ್ಣ ತಮ್ಮ ಹೆತ್ತಪ್ಪ ಗೋತ್ರವಾದಡೇನು? ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯ ಗಂಟು ಭಕ್ತಿ ನಾಯಕ ನರಕ ಕೂಡಲ ಸಂಗಮದೇವ".

ಇನ್ನು ಇತರ ಸಂಬಂಧಗಳ ವಿಚಾರ. ಮನುಷ್ಯನ ಗೆಳೆತನದಿಂದಾಗಲಿ, ಇಲ್ಲವೆ ವ್ಯವಹಾರ ಸಂಬಂಧದಲ್ಲಿ ಸಿಕ್ಕಿ ಹಾಕಿಕೊಳ್ಳಬಹುದಾದ ಬಿಕ್ಕಟ್ಟಿನ ಪ್ರಸಂಗದಲ್ಲಾಗಲಿ ಮತ್ತಾವ ಪ್ರಸಂಗದಲ್ಲಾಗಲಿ ಅಧರ್ಮಿಗಳನ್ನು ತನ್ನವರೆಂದು ಭಾವಿಸಿ ತನ್ನ ಶೀಲ ಸ್ವಭಾವಗಳಿಗೆ ಕುಂದು ತಂದುಕೊಳ್ಳುವನು ಪ್ರಸಂಗಕ್ಕೆ ತಕ್ಕ ಹಾಗೆ ವ್ಯವಹರಿಸುವವನು ಯಾವುದೇ ಒಂದು ಆವೇಗದಲ್ಲಿ ಸೆಳೆತಕ್ಕೆ ಸಿಕ್ಕಿ ಅಧರ್ಮಿಗಳನ್ನು ಆದರಿಸ ತನ್ನವರೆಂದು ಅವರೊಡನೆ ಗೆಳೆತನ ಮಾಡಿ ತನ್ನ ಜೀವನವನ್ನು ಹಾಳುಮಾಡಿಕೊಳ್ಳಬಹುದು. ಬಸವ ಮಹಾತ್ಮನು ಅದರ ವಿಷಯದಲ್ಲಿ ತನ್ನ ಖಂಡನೆಯನ್ನು ಇಲ್ಲಿ ವ್ಯಕ್ತಪಡಿಸಿರುವನ್ನು. ಈ ವಚನದಲ್ಲಿ ಬಸವೇಶ್ವರನ ಗುಣದ ಒಂದು ವೈಶಿಷ್ಟ್ಯವೂ ವ್ಯಕ್ತವಾಗಿರುತ್ತದೆ. ಮಹಾಪುರುಷರು ಒಂದು ಜನಾಂಗಕ್ಕೆ ಹಿತಕಾರಿಯಾದ ತಮ್ಮ ಜೀವನವನ್ನೆ ಕೊಡಲು ಸಿದ್ಧರಿರುತ್ತಾರೆ. ಅದನ್ನೇ ಸ್ವಾಮಿ ವಿವೇಕಾನಂದರು ಒಮ್ಮೆ ಈ ರೀತಿ ನುಡಿದರು. ಜಗತ್ತಿನ ದುಃಖವನ್ನು ಕಳೆಯಲು ಹಾಗೂ ಯಾರದಾದರೂ ಅಲ್ಪ ನೋವನ್ನು ನಿವಾರಿಸುವಂತಿದ್ದರೂ ನಾನು ಸಾವಿರಾರು ಜನ್ಮಗಳನ್ನೆತ್ತಲು ಆನಂದದಿಂದ ಒಪ್ಪುತ್ತೇನೆ"-ಎಂಬುದೇ ಅದರ ಗೂಢಾರ್ಥ. ಹೀಗಿರಲು ಮಹಾಪುರುಷರು ತಮ್ಮ ಅಂತರಾತ್ಮವನು ನುಡಿಯುವ ಮಾತಿಗೆ ಮಾನ್ಯಮಾಡುವುದರ ಸಲುವಾಗಿ ಬೇಕಾದುದನ್ನು ಮಾಡುವರು. ಅದಕ್ಕೆ ದೇವರೇ ಅಡ್ಡ ಬಂದರೂ ಅವರು ನಿಲ್ಲಿಸುವುದಿಲ್ಲ. ದೇವರು ಬಂದು ಅದನ್ನು ಮಾಡಿರುತ್ತಾನೆ. ಅದಕ್ಕೆ ಎದುರಾಗಿ ಹೋಗಬೇಡ ಎಂದು ನುಡಿದರೆ ಮಹಾತ್ಮರು ದೇವ ನೀನು ಮಾಡಿರಬಹುದು. ಆದರೆ ಅದರಿಂದ ಜಗತ್ತಿಗೆ ಹಿತವಾಗಲಾರದು. ಅದನ್ನು ನಾನು ತೆಗೆದು ಹಾಕಿಬಿಡುತ್ತೇನೆ. ಈ ಭಾವವನ್ನು ಬಸವೇಶ್ವರನು 'ನೀ ಮುನಿದರೆ ಮುನಿ' ಎಂಬುದರಲ್ಲಿ ಹೊರಗೆಡವಿರುವನು. ಪರಮಾತ್ಮನೇ ನಿನ್ನನ್ನು ಆರಾಧಿಸದಿರುವವರನ್ನು ಖಂಡಿತವಾಗಿಯೂ ನಾನು ಬಲ್ಲೆನು. ಅವರ ಸಂಘದ ಗೆಳೆತನ ಮಾಡಲಾರೆನು. ನೀನು ಬೇಕಾದರೆ ನನ್ನ ಮೇಲೆ ಸಿಟ್ಟಿಗೇಳು ಆದರೆ ನಾನು ಹಾಗೆ ಮಾಡಲಾರೆ.

ಇದಕ್ಕೆ ನಿನ್ನ ಹಾಗೂ ನಿನ್ನ ಪ್ರಮಥರ ಆಣೆಯಿರಲಿ. ಹಿಂದಿನ ಯಾಜ ಸಂಬಂಧ ದಿಂದಾಗಲಿ, ವೇದದಲ್ಲಿ ನುಡಿದಿರುವ, ಶಾಸ್ತ್ರದಲ್ಲಿ ಹೇಳಿರುವ ಕೆಲವು ತಪ್ಪು ನಿಯಮಗಳ ಆಚರಣೆಯಿಂದಾಗಲಿ, ನನ್ನವರೆಂದು ಅದರಂತೆ ನಾನು ಖಂಡಿತವಾಗಿ ಆಚರಿಸುವುದಿಲ್ಲ. ಅವರನ್ನು ನನ್ನವರೆಂದು ಭಾವಿಸುವುದಿಲ್ಲ, ನನಗೆ ಬೇಕಾದ ಬಂಧುಗಳಾಗಿರಲಿ ಅವರ ಬಂಧು ಸಂಬಂಧಕ್ಕೆ ಸೋತು ಹಿಂಜರಿದರೆ ನನಗೆ ನರಕ ವಾಗಲಿ. ಹಾಗೆ ಮಾಡಿದರೆ ನಾನು ನಿನಗೆ ಬಹಳ ದೂರವಿರುವೆನು. ಏಕೆಂದರೆ ನನ್ನ ಜನ್ಮಾಂತರದ ಸುಖ ದುಃಖಗಳಲ್ಲಿ ಅವರು ಭಾಗಿಗಳಾಗಲಾರರು. ನನ್ನ ಜೀವನದ ಉನ್ನತಿ ಅವನತಿಗಳಲ್ಲಿ ಅವರು ಎಂದೂ ಭಾಗವಹಿಸುವುದಿಲ್ಲ. ಇದಕ್ಕೆ ಪರಮಾತ್ಮನ ಆಣೆಯಿರಲಿ ಎಂದು ನುಡಿದಿರುವನು.

---

ಏಳು ಕೋಟಿ ಮಹಾಮಂತ್ರ. ಉಪಮಂತ್ರಗಳಿಗೆ ಲೆಕ್ಕವಿಲ್ಲ. ಚಿತ್ತ ವ್ಯಾಕುಳನಾಗಿ ಭ್ರಮಿಸದಿರಾ. ಎಲೆ ಮನವೇ, ಶಿವ ಶಿವಾ, ಎಂದರೆ ಸಾಲದೆ? ಅದೆಂತೆಂದೊಡೆ, "ಶಿವೇತಿ ಮಂಗಳಂ ನಾಮ । ಯಸ್ಯ ವಾಚ್ಯಂ ಪ್ರವರ್ತತೆ । ಭಸ್ಮೀಭವಂತು ತಸ್ಯ ತು । ಮಹಾಪಾತಕ ಕೋಟಯಃ ।" ಎಂಬುದಾಗಿ ಎನಗಿದೇ ತಂತ್ರ, ಎನಗಿದೇ ಮಂತ್ರ, ಎನಗಿದೇ ಗತಿ ಮತಿ ಚೈತನ್ಯವಯ್ಯಾ. ಸದ್ಗುರು ಚನ್ನಮಲ್ಲಿಕಾರ್ಜುನ ತೋರಿದ ಎನಗಿದೇ ಸಹಜ ಮಂತ್ರ.

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ. ಬೆಳೆದನು ಅಸಂಖ್ಯಾತರ ಕರುಣ ದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ. ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ! ಇಂತಪ್ಪ ತ್ರಿವಿಧಾಮೃತವ ದಣಿಯಲೆರದು ಸಲಹಿ ದರೆನ್ನ ವಿವಾಹವ ಮಾಡಿದಿರಿ. ಸಯುವಪ್ಪ ಗಂಡಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹೂವ್ವ ತಾಹೆನಲ್ಲದೆ, ಹುಲ್ಲ ತಾರೆನು. ಅವಧರಿಸಿ ನಿಮ್ಮಡಿಗಳೆಲ್ಲರು. ಮರಳಿ ಬಿಜಯಂ ಗೈವುದು ಶರಣಾರ್ಥಿ.

—ಮಹಾದೇವಿಯಕ್ಕ

# ಭಾರತ ಸರ್ಕಾರದ ವಾರ್ತಾ ಶಾಖೆ
# ಬೆಂಗಳೂರು

**ವಿಶೇಷ ಲೇಖನ**

## ತಾಂಬರಮನ ಪೈಲಟ್ ತರಪೇತಿ ಶಾಲೆ

ಭಾರತ ಅಭಿವೃದ್ಧಿಶೀಲ ರಾಷ್ಟ್ರ. ಗಡಿ ರಕ್ಷಣೆ ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಅತ್ಯಗತ್ಯ. 1986 ಅಕ್ಟೋಬರ್ 8ರ ವೇಳೆಗೆ 54 ವರ್ಷಗಳ ಸೇವೆಯನ್ನು ಸಲ್ಲಿಸಿ ಮುಂದುವರೆದಿರುವ ಭಾರತೀಯ ವಿಮಾನ ಬಲ ಈ ದಿಸೆಯಲ್ಲಿ ಬಹಳಷ್ಟು ಪರಿಣಾಮಕಾರಿ; ರಾಷ್ಟ್ರಕ್ಕೆ ಜನತೆಗೆ ತನ್ನದೆ ಆದ ಸೇವೆಯನ್ನು ಸಲ್ಲಿಸಿದೆ.

ವಿಮಾನ ಬಲದ ಯುದ್ಧ ಮತ್ತು ಇತರೆ ವಿಮಾನಗಳ ಚಾಲಕರಿಗೆ ಹಾಗೂ ಪಡೆಯ ಸಿಬ್ಬಂದಿಗೆ ತರಪೇತಿ ನೀಡಬಲ್ಲ ಬೃಹತ್ ಸಂಸ್ಥೆಯೊಂದು ಮದರಾಸಿನ ತಾಂಬರಮನಲ್ಲಿದೆ. ಸುಮಾರು 33 ವರ್ಷಗಳ ಹಿಂದೆ ಸ್ಥಾಪನೆಯಾದ ಈ ಸಂಸ್ಥೆ 1500 ಎಕರೆ ಪ್ರದೇಶವನ್ನು ವ್ಯಾಪಿಸಿದ್ದು ಭಾವೀ ಚಾಲಕರಿಗೆ, ವಾಯು ಪಡೆಯ ಸೈನಿಕರು ಹಾಗೂ ವಿಮಾನಗಳ ವಿವಿಧ ಭಾಗಗಳ ದುರಸ್ತಿ ಇತ್ಯಾದಿಗಳನ್ನು ವಿಶೇಷ ತರಪೇತಿ ನೀಡುತ್ತಿದೆ. ತಾಂತ್ರಿಕ ಹಾಗೂ ತಾಂತ್ರಿಕೇತರ ವಿಷಯಗಳಲ್ಲಿ ಉತ್ತಮ ತರಪೇತಿ ಇಲ್ಲಿನ ವೈಮಾನಿಕರಿಗೆ ದೊರೆಯುತ್ತಿದೆ. ರಾಷ್ಟ್ರದಲ್ಲಿ ವಿಮಾನ ಪಡೆಯ ಅತ್ಯಂತ ದೊಡ್ಡ ಸಂಸ್ಥೆಗಳಲ್ಲಿ ತಾಂಬರಮ ಸಂಸ್ಥೆ ಒಂದಾಗಿದೆ. ಸದ್ಯದಲ್ಲಿ ತಾಂಬರಮದಲ್ಲಿ ಸಾವಿರಾರು ವಾಯುಪಡೆಯ ಸಿಬ್ಬಂದಿ ಸೇವೆಯಲ್ಲಿ ನಿರತರಾಗಿದ್ದಾರೆ. ಅವರ ಸೇವೆ ಅತ್ಯಮೂಲ್ಯ, ಅನುಪಮ.

ತಾಂಬರಮ ಸಂಕೀರ್ಣದಲ್ಲಿರುವ ವಿವಿಧ ವಿಭಾಗಗಳಲ್ಲಿ ತಾಂತ್ರಿಕ ತರಪೇತಿ ಸಂಸ್ಥೆ ಹಾಗೂ ಕಾರ್ಯಾಗಾರ ತರಪೇತಿ ಸಂಸ್ಥೆ ಬಹಳ ಮಹತ್ವದ್ದಾಗಿದೆ. ವಿಮಾನ ಚಾಲಕರಿಗೆ ತರಪೇತಿ ನೀಡುವುದು ಫ್ಲೈಯಿಂಗ್ ಇನ್‌ಸ್ಟ್ರಕ್ಟರ್ ಶಾಖೆಗೆ ಸಂಬಂಧಿಸಿದ್ದು, ವಾಯುಪಡೆಯಲ್ಲಿ ಇದೀಗ ಕೆಲಸ ಮಾಡುತ್ತಿರುವ ವಿಮಾನ ಚಾಲಕ ತರಪೇತಿ ನೀಡಲಾಗುವುದಿದ್ದು ಇಂಜನ್ ಹಾಗೂ ಅಸ್ತ್ರಗಳ ಅಳವಡಿಕೆ ಬಗ್ಗೆಯೂ ಸಾಮಾನ್ಯ ಜ್ಞಾನ ದೊರಕಿಸಿಕೊಡಲಾಗುವುದು. ಹವಾಮಾನ ಶಾಸ್ತ್ರ, ಶಸ್ತ್ರಾಸ್ತ್ರಗಳ ಸಂರಕ್ಷಣೆ ಬಗ್ಗೆಯೂ ವಿಶೇಷ ತರಗತಿಗಳನ್ನು ನಡೆಸಲಾಗುವುದು. ಇತ್ತೀಚೆಗೆ ಈ ತರಪೇತಿ ಕೇಂದ್ರದಲ್ಲಿ ಕಂಪ್ಯೂಟರ್‌ಗಳ ಬಳಕೆ

ಯಿಂದಾಗಿ ವಿಮಾನದಲ್ಲಿ ಸಾಮಾನ್ಯವಾಗಿ ಉದ್ಭವಿಸುವ ದೋಷಗಳ ಬಗ್ಗೆಯೂ ಅಭ್ಯರ್ಥಿಗಳಿಗೆ ವಿಶೇಷ ಅನುಭವ ನೀಡಲಾಗುತ್ತದೆ. ಅಂಬಾಲದಲ್ಲಿ 1948ರಲ್ಲಿ ಸ್ಥಾಪನೆಯಾದ ತಾಂಬರಮನ ವಾಯು ಪಡೆಯ ಕೇಂದ್ರವನ್ನು 1953ರಲ್ಲಿ ಮದರಾಸಿಗೆ ವರ್ಗಾಯಿಸಲಾಯಿತು.

ತರಪೇತಿ ನೀಡಬಲ್ಲ ಶಿಕ್ಷಕರ ಆಯ್ಕೆ ಈ ಕೇಂದ್ರದ ಮತ್ತೊಂದು ವಿಶೇಷ. ವಿಮಾನ ಚಲನೆಯಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿ, ವಿಮಾನದ ಬಗ್ಗೆ ವಿವಿಧ ಭಾಗಗಳ ಬಗ್ಗೆ ಹೆಚ್ಚು ತಿಳಿದಿರುವಂತಹಾ ವಿಮಾನ ಹಾರಾಟಗಾರರನ್ನೇ ಆಯ್ಕೆ ಮಾಡಲಾಗುವುದು ಕೇವಲ ಭಾರತೀಯ ವಿಮಾನ ಬಲದ ಚಾಲಕರಲ್ಲದೆ, ವಿವಿಧ ಅಭಿವೃದ್ಧಿಶೀಲ ರಾಷ್ಟ್ರಗಳ ಅಭ್ಯರ್ಥಿಗಳಿಗೂ ತರಪೇತಿ ದೊರೆಯುವುದು. ಬೋಟ್ಸ್ವಾನಾ ನೈಜೀರಿಯಾ ದೇಶಗಳ ವಿಮಾನ ಪಡೆಗಳ ಅಧಿಕಾರಿಗಳು ಇಲ್ಲಿ ತರಪೇತಿ ಪಡೆಯುತ್ತಿದ್ದಾರೆ. ವಿಮಾನ ಚಾಲನೆಯ ತರಪೇತಿ ಅವಧಿ ಕೇವಲ 22 ವಾರಗಳಷ್ಟೇ ಅದರೂ ಪಠ್ಯಕ್ರಮ ಕಠಿಣವಾದ್ದು ಮತ್ತೆ ತರಪೇತಿಯನ್ನು ನೀಡಲು ವ್ಯವಸ್ಥೆ ಇದೆ. ●

ಶಶ್ರೀ : ಶ: 297

---

ಅಯ್ಯಾ, ಸದಾಚಾರ, ಸದ್ಭಕ್ತಿ, ಸತ್ಕ್ರಿಯೆ, ಸಮ್ಯಜ್ಞಾನ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತ ಭೇಧ, ಸತ್ಪಾತ್ರ, ದ್ರವ್ಯಾರ್ಪಣ, ಗೌರವ ಬುದ್ಧಿ, ಲಿಂಗ ಲೀಯ, ಜಂಗಮಾನುಭಾವ, ದಶವಿಧ ಪಾದೋದಕ, ಏಕಾದಶ ಪ್ರಸಾದ, ಷೋಡ ಭಕ್ತಿನಿರ್ವಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ. ತ್ರಿವಿಧ ಷಡ್ವಿಧ ನವವಿಧ ಜಪ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಿತ, ಚಿದ್ವಿಭೂತಿ ಸ್ನಾನ ಧೂಳನ ಧಾರಣ, ಮಾತಾಡುವ ಸತ್ಯ ಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷ ತಾ ಕೊಟ್ಟುಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆನುಡಿ, ತಾ ನಿಂದ ನಿರ್ವಾಣ ಪದ, ಇಂತೀ ಮೂವತ್ತೆರಡು ಕಲೆಗಳ ಸದ್ಗುರು ಮುಖದಿಂದರಿದ ಬಸವ ಮೊದಲಾದ ಸಮಸ್ತ ಸಮಸ್ತ ಗಣಂಗಳೆಲ್ಲ ನಿರಾಭಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದರುನೋಡಾ. ಇಂತು ಪ್ರಮಥಗಣಂಗಳಾಚರಿಸಿದ ಸನ್ಮಾರ್ಗವನ್ನರಿಯದ ಮೂಢ ಅಧಮರನೆಂತು ಶಿವಶಕ್ತಿ ಶಿವಭಕ್ತಿ ಶಿವಜಂಗಮವೆಂಬೆನಯ್ಯ ಚನ್ನಮಲ್ಲಿಕಾರ್ಜುನಾ ?

ಗುಣದೋಷ ಸಂಪಾದನೆಯ ಮಾಡುವನ್ನಕ್ಕರ, ಕಾಮದ ಒಡಲು, ಕ್ರೋಧದ ಗೊತ್ತು, ಲೋಭದ ಇಕ್ಕೆ, ಮೋಹದ ಮಂದಿರ ಮದದಾವರಣ, ಮತ್ಸರದ ಹೊದಿಕೆ, ಆಭವನರತಲ್ಲದೆ, ಚನ್ನಮಲ್ಲಿಕಾರ್ಜುನನರಿವುದಕ್ಕೆ ಇಂಬಿಲ್ಲ ಕಾಣಿರಣ್ಣ.

—ಮಹಾದೇವಿಅಕ್ಕ

# ನಾಮಜಪದ ಮಹಿಮೆ

(ಮುಂದುವರಿದ ಲೇಖನ ೨)

—ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ

ಶಾಲಾ ಶಿಕ್ಷಕರು, ಗೋಕುಲ (ಹುಬ್ಬಳ್ಳಿ) ಆಯುರ್ವೇದ
ಉಚಿತ ಚಿಕಿತ್ಸಾ ಸಲಹೆಗಾರರು (ಆರ್ ಎಂ ಪಿ& ಎಂ ಆಯ್ ಹೆಚ್) ಸಾಹಿತ್ಯ ಸುಧಾಕರ

ಕುಂಡಲಿಯಲ್ಲಿಯ ೧೨ ಸ್ಥಾನಗಳ ವಿಚಾರ:-ಕುಂಡಲಿಯಲ್ಲಿ ೧೨ ಸ್ಥಾನಗಳ ಪೈಕಿ ಪ್ರತಿಯೊಂದು ಸ್ಥಾನವೂ ಪ್ರತಿಯೊಂದು ಕೋಟಿ ಜಪದಿಂದ ಶುದ್ಧವಾಗುವದು ಎಂದು ಹೇಳಿದ್ದರ ವಿವರಣೆಯು ಕೆಳಗಿನಂತೆ ಇದೆ.

ಒಂದನೆಯ ಕೋಟಿ ಜಪಕ್ಕೆ:-"ತನುಸ್ಥಾನ,, ಶುದ್ಧವಾಗುವದು ಶರೀರದೊಳಗಿನ ರಜತಮಗಳ ನಾಶವಾಗಿ ಸಾತ್ವಿಕನಾಗುವವನು, ರೋಗ ಬೀಜಗಳ ನಾಶವಾಗುವವು ಕಲ್ಪನೆಗಳ ಓಘವು ಕಡಿಮೆಯಾಗುವದು. ಶುಭಕರಗಳಾದ ಸ್ವಪ್ನಗಳು ಬೀಳುವವು-ಸ್ವಪ್ನದಲ್ಲಿ ದೇವರ ಮೂರ್ತಿಗಳ ಮತ್ತು ಸಾಧು ಸಂತರ ಮೂರ್ತಿಗಳ ದರ್ಶನಗಳಾಗುವವು. ದೇವರ ಮೂರ್ತಿಗಳಲ್ಲಿ ಸಂಭಾಷಣೆಗಳು ಸುರುವಾಗುವವು. ಹೀಗೆ ಅನುಭವಗಳು ಬರಲು ಸಾತ್ವಿಕ ಶುದ್ಧ ಅಥವಾ ಬೆಳವಣಿಗೆಗೆ ಸುರುವಾಗಿರುವದು ಎಂದು ತಿಳಿಯಬೇಕು.

ಎರಡನೆಯ ಕೋಟಿ ಜಪಕ್ಕೆ:-"ಧನಸ್ಥಾನ,, ಇಲ್ಲವೆ "ಕುಟುಂಭಸ್ಥಾನ,, (ಎಲ್ಲ ಪರಿವಾರ) ಶುದ್ಧವಾಗುವವು ಧನ ಪ್ರಾಪ್ತಿಯಾಗಿ ಸಾಲವಿದ್ದರೆ ತೀರುವದು ಕುಟುಂಬ ಸೌಖ್ಯವು ಬೆಳೆಯುವದು. ಕುಟುಂಬದಲ್ಲಿ ಯಾವ ತೊಂದರೆಯೂ ಬೀಳಲಾರದು.

ಮೂರನೆಯ ಕೋಟಿ ಜಪಕ್ಕೆ:-"ಪರಾಕ್ರಮ ಸ್ಥಾನ,, "ಭ್ರಾತೃಸ್ಥಾನ,, ಇಲ್ಲವೆ ಸಹಜಸ್ಥಾನ ಅನ್ನುವದು ಶುದ್ಧವಾಗುವದು, ಮೊದಲು ಆಗದಂಥ ಮತ್ತು ಅವಶ್ಯವೆನಿಸಿದ ಕಾರ್ಯಗಳು ಸಹಜವಾಗಿ ಶುದ್ಧವಾಗುವವು. ಅಣ್ಣ ತಮ್ಮಂದಿರಲ್ಲಿ ಜಗಳವಿದ್ದರೆ ಆಪ್ತರಲ್ಲಿ ಜಗಳವಿದ್ದರೆ ಅದು ಕಡಿಮೆಯಾಗಿ ಪ್ರೇಮವು ಹೆಚ್ಚಾಗುವದು.

ನಾಲ್ಕನೆಯ ಕೋಟಿಯಲ್ಲಿ:- "ಸುಹೃದಸ್ಥಾನ,, ಇಲ್ಲವೆ "ಮಾತೃಸ್ಥಾನ,, ಇಲ್ಲವೆ "ಸುಖಸ್ಥಾನವು, ಶುದ್ಧಿಯಾಗುವದು. ಮನಸ್ಸಿಗೆ ಯಾವದೇ ತರದ ತೊಂದರೆ ಎನಿಸದಂತೆ ಇರುವದು. ಮೊದಲಿನ ಪರಿಣಾಮಗಳು ಇಲ್ಲದಂತಾಗುವವು (ಶಾರೀರಿಕ ಮತ್ತು ಮಾನಸಿಕ ಪರಿಣಾಮಗಳು)

ಐದನೆಯು ಕೋಟಿ ಜಪದಲ್ಲಿ:- "ಪುತ್ರಸ್ಥಾನ ಇಲ್ಲವೆ "ವಿದ್ಯಾ ಸ್ಥಾನವು,, ಶುದ್ಧವಾಗುವವು. ಮಕ್ಕಳಾಗದಿದ್ದರೆ. ಮಕ್ಕಳಾಗುವವು. ಮಕ್ಕಳು ಅನುಕೂಲವಿಲ್ಲ ದಿದ್ದರೆ ಅನುಕೂಲರಾಗುವರು. ವಿದ್ಯೆ ಇಲ್ಲದವನು ಇದ್ದರೆ ಯಾವದಾದರೂ ವಿದ್ಯೆ ಯಲ್ಲಿ ತಯಾರಾಗುವ ಶಕ್ತಿ ಅವನ ಬುದ್ಧಿಗೆ ಉಂಟಾಗುವದು ತಡಕೊಳ್ಳುವ ಶಕ್ತಿ ಮತ್ತು ಗ್ರಹಣ ಶಕ್ತಿಯೂ ಬೆಳೆಯುವದು.

ಆರನೆಯು ಕೋಟಿ ಜಪದಲ್ಲಿ:- 'ಶತ್ರುಸ್ಥಾನ, ಇಲ್ಲವೆ "ರೋಗಸ್ಥಾನ,, ಶುದ್ಧ ವಾಗುವವು. ಹೊರಗಿನ ಶತ್ರುಗಳು ಇಲ್ಲವೆ ಅಂತರಂಗದ ಶತ್ರುಗಳು ಅಂದರೆ ಕಾಮ ಕ್ರೋಧ ಮೊದಲಾದ ಅರಿಷಡ್ವೈರಿಗಳು. ಇಲ್ಲದಂತಾಗುವವು, (೧ನೇ ಕೋಟಿ ಜಪದಲ್ಲಿ ರೋಗಗಳು ನಿರ್ಭಲವಾಗುವವು ಮತ್ತು ಪೂರ್ಣವಾಗಿಯೂ ನಾಶ ಹೊಂದುವವು)

ಏಳನೆಯು ಕೋಟಿ ಜಪದಲ್ಲಿ:- "ಜಾಯಾಸ್ಥಾನ,, ಶುದ್ಧಿಯಾಗುವದು, ಲಗ್ನ ವಾಗದವರು ಇದ್ದರೆ ಲಗ್ನವಾಗುವರು. ಹೆಂಡತಿಯ ಅನುಕೂಲವಿಲ್ಲದಿದ್ದರೆ ಅನುಕೂಲ ಳಾಗುವಳು. ಸ್ತ್ರೀ ಸೌಖ್ಯ ಬೆಳವಣಿಗೆಯಾಗುವದು. ಸ್ತ್ರೀಯರಿಗೆ ಪತಿ-ಸೌಖ್ಯ ದೊರೆಯುವುದರಲ್ಲಿ ಸಂಶಯವಿಲ್ಲಾ.

ಎಂಟನೆಯು ಕೋಟಿ ಜಪದಲ್ಲಿ:— 'ಮೃತ್ಯು ಸ್ಥಾನ, ಇಲ್ಲವೆ ಗಂಡಾಂತರ ಸ್ಥಾನ, ಶುದ್ಧಿಯಾಗಿ ಅಕಾಲಮೃತ್ಯು—ಅಪಮೃತ್ಯುಗಳು ತಡೆಗಟ್ಟುವವು.

ಒಂಭತ್ತನೆಯು ಕೋಟಿ ಜಪದಲ್ಲಿ :- 'ಧರ್ಮಸ್ಥಾನದ,, ಶುದ್ಧಿಯಾಗುವದು ಮಂತ್ರ ದೇವತೆಯ ಸಗುಣ ಸಾಕ್ಷಾತ್ಕಾರವಾಗುವದು.- ಈ ಆನಂದವನ್ನು ಹೇಳಲು ಅಸಾಧ್ಯವಾದಂತಹದು.

ಹತ್ತನೆಯು ಕೋಟಿ ಜಪದಲ್ಲಿ :- 'ಕರ್ಮಸ್ಥಾನ,, ಇಲ್ಲವೆ ಪಿತೃಸ್ಥಾನ, ಶುದ್ಧ ವಾಗುವದು ಕೆಟ್ಟ ಕರ್ಮಗಳು ಇಲ್ಲದಂತಾಗುವವು. ಕೈಯಿಂದ ಸತ್ಕಾರ್ಯಗಳೇ ಕೈಗೂಡುವವು. ಸಾಧು ಸಂತರ ದರ್ಶನ. ಪಂಚ ಪೀಠಸ್ಥರ ಶ್ರೀಗಳವರ ದರ್ಶನ ಗಳು ತಮ್ಮಿಂದ ತಾವೇ ಆಗುವವು.

ಹನ್ನೊಂದನೆಯು ಕೋಟಿ ಜಪದಲ್ಲಿ :- 'ಲಾಭಸ್ಥಾನವು,, ಶುದ್ಧಿಯಾಗು ವದು ಪ್ರಾಪಂಚಿಕ ಧನ ಧಾನ್ಯ ಗೃಹ ಭೂಮಿ ಮೊದಲಾದುವುಗಳ ಲಾಭವಾಗುವದು ಸತ್ವ ಗುಣದ ಪೂರ್ಣ ವೃದ್ಧಿಯಾಗುವದು.

ಹನ್ನೆರಡನೆಯ ಕೋಟಿ ಜಪದಲ್ಲಿ :– 'ವ್ಯಯಸ್ಥಾನವು,, ಶುದ್ಧಿಯಾಗುವದು ರಜ ತಮಗುಣಗಳು ಪೂರ್ಣ ನಾಶವಾಗಿ ಗುರು ಅನುಗ್ರಹವು ಸ್ವಪ್ನದಲ್ಲಿ ಇಲ್ಲವೆ ಪ್ರತ್ಯಕ್ಷವಾಗಿ ಆಗಿ ಕೃತಾರ್ಥತೆ ಪ್ರಾಪ್ತವಾಗುವದು.

ಪ್ರತಿಯೊಂದು ಸ್ಥಾನದಲ್ಲಿ ಮತ್ತೆ ಒಂಭತ್ತು ಭಾಗಗಳಿರುವವು ಅವಕ್ಕೆ 'ನವಾಂಶ, ಎನ್ನುವರು ಪ್ರತಿಯೊಂದು ೧೨ ಲಕ್ಷದಲ್ಲಿ ಒಂದು ನವಾಂಶ ಶುದ್ಧಿಯಾಗುವದು. ಮತ್ತು ಹೊರಗಿನ ಇಲ್ಲವೆ ಅಂತರಂಗದ ಪರಿಸ್ಥಿತಿಯಲ್ಲಿ ಏನಾದರೂ ಹೊಸದು ಇಲ್ಲವೆ ಬದಲು ಅನುಭವಕ್ಕೆ ಬರುವದು ಹೀಗೆ ಪ್ರತಿಯೊಂದು ೧೨ ಲಕ್ಷಕ್ಕೆ ತಮ್ಮ ಅನುಭವವನ್ನು ಬರೆದಿಡಲು ಅದರ ಮೇಲಿಂದ ತಮ್ಮ ಜನ್ಮ ಪತ್ರಿಕೆಯನ್ನು ಶುದ್ಧವಾದ ರೀತಿಯಲ್ಲಿ ತಯಾರು ಮಾಡಲು ಬರುವದು ಅದರಲ್ಲಿ ಯಾವದಾದರೂ ತಪ್ಪು ಆದಲ್ಲಿ ತಿದ್ದಲು ಬರುವದು.

ಪಂಚಭೂತಗಳ ಮೇಲೆ ಅಧಿಕಾರವು :— ಪಾಶ್ಚಾತ್ಯ ಜನರಿಗೆ ವಾಯು ತತ್ವದವರೆಗೆ ಶೋಧವಾಗಿರುವದು ಈ ತತ್ವವನ್ನು ಅವರು ಸ್ವಾಧೀನವನ್ನೇ ಮಾಡಿಕೊಂಡಂತಾಗಿದೆ. ಅಂತೆಯೇ ಸಾಧಾರಣ ಜನರಿಗೆ ಆಶ್ಚರ್ಯ ಉಂಟು ಮಾಡುವ ಯಾಂತ್ರಿಕ ಶೋಧನೆಯನ್ನು ಹಚ್ಚಲು ಸಮರ್ಥರಾಗಿರುವರು ಆಕಾಶ ತತ್ವವು ಈವರೆಗೂ ಅವರಿಗೆ ಗೊತ್ತಿಲ್ಲ ಯಾಕಂದರೆ ಆಕಾಶತತ್ವವು ಬಹಳ ಸೂಕ್ಷ್ಮವಾಗಿರುವದು, [ಸೂಕ್ಷ್ಮವೆಂದರೆ ತೆಳ್ಳಗೆ, ವಿರಳವು ಆಪ್‌ವೆಂದರೆ ನೀರು ತೆಳ್ಳಗೆ ನೀರಿನಗಿಂತ ತೇಜವು ತೆಳ್ಳಗೆ ನೀರಿನಲ್ಲಿ ತೇಜದ ಕಿರಣಗಳು ಪ್ರವೇಶ ಮಾಡುವವು ಸಾಧಾರಣವಾಗಿ ಒಂದು ಆಳವು ನೀರಿನ ಸ್ವಚ್ಛತೆಯು ಮಾನದಿಂದ ಸೂರ್ಯ ಪ್ರಕಾಶದಿಂದ ಸ್ಪಷ್ಟವಾಗಿ ಕಾಣುವದು ತೇಜಕ್ಕಿಂತ ವಾಯುವು ತೆಳ್ಳಗೆ ಮತ್ತು ವಾಯುವಿಗಿಂತ ಆಕಾಶವು ತೆಳ್ಳಗಿರುವದು ವಿರಳ ವಿರುವದು ಇದೇ ಸೂಕ್ಷ್ಮತನವು] ಹೀಗೆ ಆಕಾಶ ತತ್ವವು ಬಹಳ ಸೂಕ್ಷ್ಮವಿರುವುದರಿಂದ ಅದಕ್ಕೆ ಶೂನ್ಯ ಎಂದು ಅನ್ನುವರು. ಅದು ತತ್ವವೇ ಅಲ್ಲವೆಂದು ಹೇಳುವರು (ಈಗ ಈಥರ ಎನ್ನುವ ಸೂಕ್ಷ್ಮ ದ್ರವ್ಯಕ್ಕೆ ಆಕಾಶ ಎಂದು ಅನ್ನುತ್ತಿರುವರು) ಆಕಾಶ ತತ್ವವನ್ನು ಗೊತ್ತುಹಚ್ಚಿ ಅದು ಸ್ವಾಭಿಮಾನವಾದ ನಂತರ ಮನುಷ್ಯನಿಗೆ ಈ ಸೃಷ್ಟಿಯಲ್ಲಿ ಬೇಕಾದಂಥ ಚಮತ್ಕಾರ ಮಾಡಿತೋರಿಸಬಹುದು. ಈಗಿನ ಯಾಂತ್ರಿಕ ಚಮತ್ಕಾರಗಳಿಗಿಂತ ಅಘಟಿತ ಘಟನೆಗಳನ್ನು ಅವನು ಮಾಡಿತೋರಿಸಬಲ್ಲನು. ಆಕಾಶಕ್ಕಿಂತ ‹‹ಮನಸ್ತತ್ವ,, ಸೂಕ್ಷ್ಮವು ಮನಸ್ಸಿಗಿಂತ ‹‹ಬುದ್ಧಿತತ್ವವು ಸೂಕ್ಷ್ಮ" ಬುದ್ಧಿಗಿಂತ ಪ್ರಕೃತಿತತ್ವವು ಸೂಕ್ಷ್ಮ ಮತ್ತು "ಪ್ರಕೃತಿಗಿಂತ ‹‹ಪರಮಾತ್ಮತತ್ವ,, ವು ಅತ್ಯಂತ ಸೂಕ್ಷ್ಮವಾಗಿರುವುದು. ‹‹ಸಾ ಕಷ್ಟ ಸಾ ಪರಾಗತಿಃ" ಎನ್ನುವದರಲ್ಲಿ ಅದೇ ಇದು ಇದು ಗುರು ಅನುಗ್ರಹದಿಂದ ಪ್ರಾಪ್ತವಾಗುವದಿರುತ್ತದೆ [ಗುರು ಅನುಗ್ರಹವು ಸತ್ವವೃದ್ಧಿಯಿಂದ ಆಗುವುದು. ಸತ್ವವೃದ್ಧಿಯು ಸುಲಭವಾದ

ಇಂಥ ನಾಮ ಜಪದ ಅನುಷ್ಠಾನದಿಂದ ಆಗುವುದು. ಮತ್ತು ಧ್ವನಿರೂಪವಾದ ನಾಮವು ಆಕಾಶತತ್ವದ್ದೇ ಇದ್ದುದರಿಂದ ಈ ಸಾಧನದಿಂದ ಪರಮಾತ್ಮನು ಬೇಗನೆ ಸ್ವಾಧೀನನಾಗುವನು ]

"ನಾಮ ಸ್ಮರಣೆ" ಇದು ಸುಲಭ ಮಾರ್ಗ ಮತ್ತು ಸಾಧನ ಮಾರ್ಗವಾಗಿದೆ ತಮಗೆ ಇಷ್ಟವಾದ ಮತ್ತು ಪ್ರೀತಿಯುಳ್ಳ ದೇವರ ಹೆಸರನ್ನು ಸಂಕಲ್ಪಮಾಡಿ ಅದನ್ನು ಗುರುಮುಖದಿಂದ ತೆಗೆದುಕೊಳ್ಳಬೇಕು. ಅಂದರೆ ಫಲವು ಬೇಗನೆ ಸಿಗುವದು. ನಾಮಸ್ಮರಣೆಯಲ್ಲೂ ಕೂಡಾ ಸಕಾಮ್ಯ ಮತ್ತು ನಿಷ್ಕಾಮ ಹೀಗೆ ಪ್ರಕಾರ ಇರುವವು.

ಪಂಚಭೂತಗಳ ಮೇಲೆ ಅಧಿಕಾರ— ಮುಂದುವರಿಯುವದು.

---

ಒಪ್ಪುವ ಶ್ರೀ ವಿಭೂತಿಯ ನೊಸಲಲ್ಲಿ ಧರಿಸಿ, ದೃಷ್ಟಿಯಾರೆ ನಿಮ್ಮ ನೋಡಲೊಡನೆ ಬಟ್ಟೆದಪ್ಪು ತಪ್ಪಿಹೋದಡೆ ಮುಟ್ಟಲಮ್ಮವು ನೋಡಾ! ದುರಿತವ ಪರಿಹರಿಸಬಲ್ಲುದೆ. ಓಂ ನಮಃ ಶಿವಾಯ ಶರಣೆಂಬುದೆ ಮಂತ್ರ, ನಮಃ ಶಿವಾಯ ಎಂಬುದೇ ಮಂತ್ರ ಯಃ ಕರೋತಿ ತ್ರಿಪುಂಡ್ರಕಂ॥ ಸಮಸ್ತ ಜನ್ಮ ಕೃತಂ ಪಾಪಂ ತತ್ಕ್ಷಣಾದೇವ ವಿನಶ್ಯತಿ ಎಂಬುದಾಗಿ, ಸಿಂಹದ ಮರಿಯು ಸೀಳ್ನಾಯಿ ತಿಂಬರೆ, ಭಂಗವಿನಾರದು ಚೆನ್ನಮಲ್ಲಿಕಾರ್ಜುನಾ ?

—ಮಹಾದೇವಿಯಕ್ಕ

---

# ಬನವಾಸಿ

"ವ್ಯಾಖ್ಯಾನ ವಿಭೂಷಣ"
—ಪಂಡಿತ ಕೆ. ಪಿ ಶಿವಲಿಂಗಯ್ಯ ಎಂ. ಎ, ಬಿ. ಇಡಿ.
ಪ್ರಾಂಶುಪಾಲರು, ಸರಕಾರಿ ಪದವಿ ಪೂರ್ವ ಕಾಲೇಜು (ಬಾಲಕರು) 18ನೆಯ ಅಡ್ಡರಸ್ತೆ,
ಮಲ್ಲೇಶ್ವರಂ, ಬೆಂಗಳೂರು–560003

ಪೀಠಿಕೆ ಹಾಗೂ ಕವಿವಾಣಿ:–

ಈ ಕ್ಷೇತ್ರವು ವೀರಶೈವರಿಗೆ ಜೈನರಿಗೆ ಬೌದ್ಧರಿಗೆ ಹೀಗೆ ಎಲ್ಲ ಮತದವರಿಗೂ ಯಾತ್ರಾಸ್ಥಳವಾಗಿದೆ

ಅದರೊಳವ ನೀ ಕಾಂತಿಗೊಪ್ಪುವ
ವದನವೋ ಶೃಂಗಾರ ಸಾರದ
ಸದನವೋ ಸೊಬಗಿನ ಸನ್ಮಾನದ ಸುಖದ ನೆಲವೀಡೋ !
ಸುದತಿರತ್ನಗಳೊಗೆದ ಚೆಲುವಂ
ಬುಧಿಯೊ ಪೇಳೆನೆ ಸಕಲ ಸೌರಂ
ಭದಲಿ ಸೊಗಯಿಹುದಲ್ಲಿ ಬನವಸೆಯೆಂಬ ಪಟ್ಟಣವು ॥

'ಪ್ರಭುಲಿಂಗಲೀಲೆ' ಕಾವ್ಯವನ್ನು ರಚಿಸಿದ ಯೋಗಿ-ಕವಿ ಚಾಮರಸನ ಉಕ್ತಿಯಿದು. ಚೆಲುವಲ ನಾಡಿನ ಬನವಾಸಿ ಪಟ್ಟಣದ ವರ್ಣನೆಯನ್ನು ಇಷ್ಟು ಸೊಗಸಾಗಿ ಮಾಡಿರುತ್ತಾನೆ.

ವಿಜಯನಗರದ ಅರಸು ಪ್ರೌಢದೇವರಾಯ (ಇಮ್ಮಡಿದೇವರಾಯ) ನ ಆಸ್ಥಾನದಲ್ಲಿ ಕ್ರಿ. ಶ ೧೪೩೦ ರ ಸುಮಾರಿನಲ್ಲಿ ಬದುಕಿದ್ದ ಕವಿ ಚಾಮರಸ. [ಕುಮಾರ ವ್ಯಾಸನಿಗೆ ಈತನ ತಂಗಿಯನ್ನು ಕೊಟ್ಟು ವಿವಾಹವಾಗಿದ್ದಿತೆಂದೂ, ಆಕೆಯೇ ಪತಿಯ ಪ್ರೇರಣೆಯಿಂದ ಅಣ್ಣ ಬರೆದಿದ್ದ ಅತ್ಯುತ್ತಮವೆನಿಸಿದ್ದ 'ಭಾರತ'ವನ್ನು ಸುಟ್ಟು ತನ್ನ ಕೃತಿಗೆ ಮನ್ನಣೆ ದೊರೆಯುವಂತೆ ಮಾಡಿದಳೆಂದೂ ಒಂದು ದಂತ ಕಥೆಯುಂಟು !]

ಪ್ರಭುಚರಿತೆ:– ಬಸವಣ್ಣನವರಿಂದ ಸ್ಥಾಪಿತವಾದ ಶೂನ್ಯಸಿಂಹಾಸನದ ಪ್ರಥಮಾಧ್ಯಕ್ಷ ಅಲ್ಲಮಪ್ರಭುವಿನ ಚರಿತ್ರೆಯನ್ನು ಕುರಿತ ಕೃತಿ ಪ್ರಭುಲೀಲೆ ಪ್ರಭುವನ್ನು ಅರಿದು ಬರಲೆಂದು ಪಾರ್ವತಿ ಕಳುಹಿಸಿದ ಮಾಯೆಯು ಬನವಾಸಿಯ ರಾಜ ಮಮಕಾರ ಭೂಪಾಲ–ರಾಣಿ ಮೋಹಿನೀದೇವಿ ದಂಪತಿಗಳಿಗೆ

ಮಗಳಾಗಿ ಹುಟ್ಟಿದಳು. ಶಿವನನ್ನೆ ವರಿಸುವ ವಾಂಛೆಯಿಂದ ಈಕೆಯು ಬನವಾಸಿಯ ಮಧುಕೇಶ್ವರ ದೇವಾಲಯಕ್ಕೆ ಹೋಗಿ ಆ ದೇವನಿಗೆ ತನ್ನ ನಾಟ್ಯಸೇವೆಯನ್ನು ಸಲ್ಲಿಸುತ್ತಿದ್ದಳು. ಅಲ್ಲಿಗೆ ಮದ್ದಳೆಯವನಾಗಿ ಬಂದ ಅಲ್ಲಮನನ್ನು ಕಂಡು ಮೋಹ ಪರವಶಳಾದಳು. ಆದರೆ ಆತನು ಅವಳಿಗೆ ಪರಮಾತ್ಮತತ್ತ್ವ ಜ್ಞಾನವಿಲ್ಲವೆಂದು ಅಂತರ್ಧಾನ ಹೊಂದುವನು. ಕೊನೆಗೆ ಹತಾಶಳಾದ ಮಾಯೆ ಕೈಲಾಸಕ್ಕೆ ತೆರಳಿದಳು.

ಮಧುಕೇಶ್ವರ ದೇವಾಲಯವನ್ನು ಕುರಿತು ಕವಿವಾಣಿಯಿಂತಿದೆ !

"ಇದುವೆ ಕೈಲಾಸಾದ್ರಿಯೋ ಮೇ
ಣಿದು ಶಶಾಂಕನ ತಗಡಿನಲಿ ಹೊದೆ
ಸಿದ ವಿನೂತನ ಪುಷ್ಪಕವೊ ಪೇಳೆನಲು ತೊಳಗುತಲಿ
ಹುದುಗಿ ಗುಡಿ ತೋರಣ ಪತಾಕೆಗ
ಳೊದವಿನಲಿ ಹೊಂಗಳಸದಲಿ ತೋ
ರಿದುದು ಮಾಯೆಗೆ ಮಧುಕೇಶ್ವರನ ವರಭವನ"

ಕನ್ನಡದ ಆದಿಕವಿಯೆನಿಸಿದ ಪಂಪಮಹಾಕವಿಯ ಬಯಕೆಯಿದು:

''ಚಾಗದಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರಮಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ
ನಾಗಿಯುಮೇನೋ ತೀರ್ದಪುದೇ ತೀರದೊಡಂ ಮರಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿದೇಶದೊಳ್''

ಕನ್ನಡ ನಾಡಿನಲ್ಲಿ ಮನುಷ್ಯನಾಗಿ ಹುಟ್ಟಲು ಪುಣ್ಯದ ಬಲವಿರಬೇಕು. ಇದರ ಸೊಗಸನ್ನು ಅನುಭವಿಸಲು ಮರಿದುಂಬಿಯಾಗಿ ಕೋಗಿಲೆಯಾಗಿಯಾದರೂ ಇಲ್ಲಿ ಹುಟ್ಟಬೇಕು—ಎನ್ನುತ್ತಾನೆ ಆಂಧ್ರದ ವೆಂಗಿಪಳುವಿನಲ್ಲಿದ್ದ ಪಂಪ!

ಬನವಾಸಿ ದೇಶ ವಿಸ್ತೀರ್ಣ:—ಕಾರವಾರ ಜಿಲ್ಲೆಯಲ್ಲಿ ಶಿರಸಿಗೆ ಹದಿನಾಲ್ಕು ಮೈಲಿ ದೂರದಲ್ಲಿದೆ 'ಧರಿತ್ರಿ......ತುಂಗಭದ್ರೆಯ ನದಿಯ ಮಧ್ಯಪ್ರದೇಶದೊಳ್ ಸೊಗಯಿಸುಗುಂ ಸಿರಿಯ ಶತಮರ್ಗನೆ ಸೌಖ್ಯಾಕರ ಮನೆ ಬನವಾಸಿದೇಶಮತುಳ ವಿಳಾಸಂ'-ಎಂದೀ ಹರಳಹಳ್ಳಿಯೆಂಬಲ್ಲಿಯ ಶಾಸನಪ್ರಕಾರ ಬನವಾಸಿದೇಶವು ತುಂಗಭದ್ರೆಯಿಂದ ಹಿಡಿದು ವರದಾನದಿಯವರೆಗೂ ಹಬ್ಬಿತ್ತು. ಸಾಮಾನ್ಯವಾಗಿ ಇದನ್ನು ಬನವಾಸಿ ಪನ್ನಿರ್ಛಾಸಿರ ಎಂದು ಆ ಕಾಲದಲ್ಲಿ ಕರೆಯಲಾಗುತ್ತಿತ್ತು. ಹನ್ನೆರಡು ಸಾವಿರ ಗ್ರಾಮಗಳನ್ನೊಳಗೊಂಡ ಪ್ರದೇಶವೆಂದು ಅದರ ಅರ್ಥ.

ಬನವಾಸಿ-ಹೆಸರು:-ಸಂಜಯಂತೀ, ವೈಜಯಂತೀ, ಜಯಂತೀ ಜಯಂತೀಪುರ, ಕನಕಾಪುರ ಇವು ಬನವಾಸಿಗೆ ಹಿಂದೆ ಇದ್ದ ಹೆಸರುಗಳು. ಕಲ್ಯಾಣದ ಚಾಲುಕ್ಯರ ಹಾಗೂ ಕಲಚುರಿಗಳ ಕಾಲದಲ್ಲಂತೂ ಇದು ಸುಪ್ರಸಿದ್ಧ ವೈಜಯಂತೀ ನಗರವಾಗಿದ್ದು ಪ್ರಮುಖ ರಾಜಧಾನಿಗಳಲ್ಲಿ ಒಂದಾಗಿದ್ದಿತು. ಸೋದೆಯ ಇಮ್ಮಡಿ ಅರಸಪ್ಪನಾಯಕನ ಶಾಸನದಲ್ಲಿ ಬನವಾಸಿಯ ನಗರಾಧಿದೇವರನ್ನು 'ಜಯಂತೀಪುರ ವರಾಧೀಶ್ವರ ಮಧುಕೇಶ್ವರ ಸ್ವಾಮಿ' ಎಂದು ಕರೆಯಲಾಗಿದೆ.

ಬನವಾಸಿಯ ದೇವಾಲಯಗಳು:-ಮಧುಕೇಶ್ವರ ದೇವಾಲಯವು ಅತ್ಯಂತ ಮುಖ್ಯನಾದುದು. ಈ ದೇವರ ನಿತ್ಯ ನೈಮಿತ್ತಿಕ ಪೂಜಾ ಕೈಂಕರ್ಯವನ್ನು ವಂಶ ಪಾರಂಪರ್ಯವಾಗಿ ನಡೆಸಿಕೊಂಡು ಹೋಗಲು ಶೈವ ಬ್ರಾಹ್ಮಣ ವಿವಿಧ ಶಾಖಾ ಬ್ರಾಹ್ಮಣ ಮನೆತನಗಳು ಇಲ್ಲಿವೆ. ಈ ಊರಿನಲ್ಲಿ ಜೈನ ಬಸದಿಯೊಂದಿರುವುದು ಜೈನ ಪ್ರಾಚೀನತೆಯ ದ್ಯೋತಕವಾಗಿದೆ ಬಸದಿಯಲ್ಲಿ ಎಂಟನೆಯ ಒಂದು ಅಡಿ ಎತ್ತರ ತೀರ್ಥಂಕರನಾದ ಚಂದ್ರಪ್ರಭಮೂರ್ತಿಯಿದೆ.

ಮೌರ್ಯರ ಕಾಲದಿಂದಲೂ ಬನವಾಸಿಯು ಪ್ರಾಮುಖ್ಯತೆಯನ್ನು ಪಡೆದಿತ್ತೆಂಬುದಕ್ಕೆ ಅನೇಕ ಆಧಾರಗಳಿವೆ. ಕ್ರಿ. ಪೂ. ೨೪೫ ರ ಸುಮಾರಿಗೆ ಅಶೋಕ ಚಕ್ರವರ್ತಿಯು ಕಳುಹಿಸಿದ ಬೌದ್ಧಭಿಕ್ಷುಗಳಲ್ಲಿ ಒಬ್ಬನಾದ 'ರಕ್ಷಿತ' ಎಂಬುವನು 'ಬನವಾಸಿ'ಗೆ ಪ್ರಯಾಣ ಮಾಡಿದನೆಂದು 'ಮಹಾವಂಶ' ವೆಂಬ ಪಾಳಿಭಾಷೆಯ ಬೌದ್ಧಗ್ರಂಥದಿಂದ ತಿಳಿದುಬರುತ್ತದೆ. ಹೀಗೆ ಬೌದ್ಧರಿಗೂ ಬನವಾಸಿಯು ಕೇಂದ್ರವೆನಿಸಿದೆ.

ವೀರಶೈವರಿಗೆ ಸಂಬಂಧಿಸಿದಂತೆ ಪ್ರಭುದೇವರ ಮತ್ತು ಬಸವೇಶ್ವರರ ಗುಡಿಗಳು ಇಲ್ಲಿವೆ. ಹೊಳೆಮಠ, ಹಿರಿಮಠ, ಚಿಕ್ಕಮಠ, ಚೌಕೀಮಠ ಮತ್ತು ಹಾಲುಮಠಗಳೆಂಬ ಪಂಚಮಠಗಳೂ ಇವೆ.

ಮಧುಕೇಶ್ವರಾಲಯಕ್ಕೆ ಅರ್ಧಮೈಲಿ ದೂರದಲ್ಲಿರುವ ಹಳೆಯ ಬನವಾಸಿ ಅಥವಾ ಆದಿಬನವಾಸಿಯಲ್ಲಿರುವ ಶಿವ ಮತ್ತು ಪಾರ್ವತಿಯರ ಎರಡು ಗುಡಿಗಳ ಮುಂದೆ 'ವಸಿಷ್ಠತೀರ್ಥ' ವೆಂಬ ಸಣ್ಣ ಹೊಂಡವಿದೆ

ಪುರಾತನ ಕೋಟೆ:-ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನದಲ್ಲಿ ಬನವಾಸಿಕೋಟೆಯ ಪ್ರಸ್ತಾಪವಿದೆ. ಸುಮಾರು ಕ್ರಿ. ಶ. ೧೦೦ನೇ ವರ್ಷದಲ್ಲಿ ಇದರ ನಿರ್ಮಾಣ ಕಾರ್ಯ ನಡೆದಿರಬಹುದೆಂದು ಊಹಿಸಲಾಗಿದೆ

ಬನವಾಸಿಯ ಪ್ರಾಚೀನತೆ:-ಸ್ಕಾಂದಪುರಾಣದ 'ವನವಾಸಿ ಮಹಾತ್ಮ್ಯೆ'

ದಲ್ಲಿ ಮಧು ಮತ್ತು ಕೈಟಭ ಎಂಬ ಹೆಸರಿನ ದೈತ್ಯ ಸೋದರರು 'ವನವಾಸ' [ಬನವಾಸಿ] ಸ್ಥಳದಲ್ಲಿ ವಾಸಿಸುತ್ತಿದ್ದರೆಂಬ ಉಲ್ಲೇಖವಿದೆ. ಈ ಮಧುವೇ ಮಧುಕೇಶ್ವರ ದೇವಾಲಯವನ್ನು ಕಟ್ಟಿಸಿದನೆಂದೂ, ಇಲ್ಲಿಯೇ ಇವರಿಬ್ಬರನ್ನೂ ವಿಷ್ಣುವು ಸಂಹರಿಸಿದನೆಂದೂ ದಂತಕಥೆಯಿದೆ.

ಪಂಚಪಾಂಡವರು ತಮ್ಮ ವನವಾಸಕಾಲದಲ್ಲಿ ಇಲ್ಲಿದ್ದರೆಂದು ಪ್ರತೀತಿಯುಂಟು. ಸಹದೇವನು ಅಣ್ಣನ ರಾಜಸೂಯಯಾಗ ಸಂಬಂಧದ ದಿಗ್ವಿಜಯಕಾಲದಲ್ಲಿ ಈ ಸಂಜಯಂತೀ ನಗರವನ್ನೂ ಗೆದ್ದುಕೊಂಡು ಬಂದುದಾಗಿ ಶ್ರೀ ಮನ್ ಮಹಾಭಾರತದಲ್ಲಿ ಹೇಳಿದೆ.

ಆನರ್ತ ದೇಶದ ಅರಸು 'ಯದು' ಎಂಬುವನ ಮಗ 'ಸಾರಸ' ನು 'ವನವಾಸಿ' ಎಂಬ ಜನಪದವನ್ನು ನೆಲೆಗೊಳಿಸಿ ಅಲ್ಲಿ ಕ್ರೌಂಚ ಪುರವನ್ನು ಸ್ಥಾಪಿಸಿದನೆಂದು 'ಹರಿವಂಶ' ದಲ್ಲಿ ಹೇಳಿದೆ. ಅಂದವೇಲೆ ಬನವಾಸಿಗೆ ಇದೂ ಒಂದು ಹೆಸರಾಗಿತ್ತೆಂದು ತಿಳಿದುಬರುತ್ತದೆ.

**ಬನವಾಸಿ-ಇತಿಹಾಸ:–** ಮೌರ್ಯರ ಅನಂತರ ದಕ್ಷಿಣಾಪಥದಲ್ಲಿ ಆಳಿದ ಸಾತವಾನರ ಅರಸು 'ಗೌತಮೀಪುತ್ರ ಸಾತಕರ್ಣಿ' ಬನವಾಸಿ ನಾಡಿನಲ್ಲಿ ಆಡಳಿತ ನಡೆಸಿದನೆಂದು ಶಾಸನದಿಂದ ತಿಳಿದುಬರುತ್ತದೆ. ಇದೇ ಸಾತವಾನರ ವಂಶೋತ್ಪನ್ನ ಪ್ರಸಿದ್ಧ ರಾಜನಾಗಿದ್ದ 'ಶಿವಶ್ರೀ ಪುಳುಮಾವಿ' ಯ ಕಾಲದ ಪ್ರಾಕೃತ ಭಾಷೆಯಲ್ಲಿ ಬರೆದ ಶಾಸನವೊಂದು ದೊರೆತಿದೆ. ಸಾತವಾಹನರ ಒಂದು ಶಾಖೆಯ ಚುಟುಸಾತಕರ್ಣಿ ಗುಂಪಿನ 'ಶಿವಸ್ಕಂದ ನಾಗಶ್ರೀ' ಎಂಬ ಹೆಣ್ಣುಮಗಳು ತನ್ನ ತಂದೆಯ ರಾಜ್ಯಭಾರದ ಹನ್ನೆರಡನೆಯ ವರ್ಷದಲ್ಲಿ ಮಧುಕೇಶ್ವರಾಲಯದ ಪ್ರಾಂಗಣದಲ್ಲಿ ಒಂದು ನಾಗಪ್ರತಿಮೆಯನ್ನು ಮಾಡಿಸಿ ಅಲ್ಲಿ ಒಂದು ಕೊಳವನ್ನು ಕಟ್ಟಿಸಿದ್ದಾಗಿ ಕ್ರಿ. ಶ. ೨ನೆಯ ಶತಮಾನದ ಶಾಸನದಿಂದ ಗೊತ್ತಾಗುತ್ತದೆ

ಇಕ್ಷ್ವಾಕುವಂಶದ ಅರಸನಾದ ವೀರಪುರುಷದತ್ತನ ಮಗಳು 'ಕೊಡಬಲಿಸಿರಿ' ಎಂಬಾಕೆ ವನವಾಸಕ [ಬನವಾಸಿ] ಮಹಾರಾಜನ ಪಟ್ಟಮಹಾದೇವಿಯಾಗಿದ್ದಳೆಂದು ನಾಗಾರ್ಜುನಕೊಂಡ ಸಮೀಪದ ಕೊಟ್ಟಂಪಲುಗು ಎಂಬಲ್ಲಿ ದೊರೆತ ಶಾಸನದಿಂದ ತಿಳಿಯುತ್ತದೆ.

**ಬನವಾಸಿಯ ಕದಂಬರು:–** ಬಳ್ಳಾರಿ ಜಿಲ್ಲೆಯ ಹಿರೇಹಡಗಲಿಯಲ್ಲಿ ಪಲ್ಲವರ ಶಿವಸ್ಕಂದವರ್ಮನ ತಾಮ್ರಶಾಸನವೊಂದು ದೊರೆತಿದೆ. ಪಲ್ಲವರು ಈ ಭಾಗವನ್ನು ಆಳುತ್ತಿದ್ದರೆನ್ನುವುದಕ್ಕೆ ಇದೊಂದು ಸಾಕ್ಷಿಯಾಗಿದೆ. ಆಗ ಶಿವಮೊಗ್ಗ ಜಿಲ್ಲೆಯ ತಾಳಗುಂದ[ಸ್ಥಾನಕುಂದೂರು] ದಲ್ಲಿ ವೀರಶರ್ಮನೆಂಬ ದ್ವಿಜೋತ್ತಮ

ಸಿದ್ಧನು. ಈತನ ಮಗ ಬಂಧುಕ್ಷೇಣ. ತಂದೆ ವೇದಾಧ್ಯಯನಸಂಪನ್ನನಾದರೆ, ಮಗ ಕ್ಷತ್ರಿಯೋಚಿತಗುಣಗಳನ್ನು ಬೆಳೆಸಿಕೊಂಡಿದ್ದನು. ಇವನ ಮಗ ಮಯೂರಶರ್ಮ ನಾದರೋ ತಾತ-ತಂದೆಯರಿಬ್ಬರ ಗುಣಗಳನ್ನೂ ಮೇಳವಿಸಿಕೊಂಡಿದ್ದ ಸ್ಫೂರ್ತಿಯ ಚಿಲುಮೆಯಂತಿದ್ದನು.

ಮಯೂರಶರ್ಮನು ಹುಟ್ಟೂರಿನಲ್ಲಿ ಕಲಿತದ್ದಾದಮೇಲೆ ಉನ್ನತ ವ್ಯಾಸಂಗ ಕ್ಕಾಗಿ ತಮಿಳುನಾಡಿನ ಕಾಂಚೀಪುರಕ್ಕೆ ಹೋದನು. ಆಗಿನ ಕಾಲಕ್ಕೆ ಅದೊಂದು ಘಟಿಕಸ್ಥಾನ (University) ಆಗಿದ್ದಿತು. ಪಲ್ಲವರ ರಾಜಧಾನಿಯೂ ಆಗಿದ್ದ ಕಂಚಿಯಲ್ಲಿ (ಈಗಿನ ಹೆಸರು) ಒಮ್ಮೆ ಕುದುರೆಲಾಯದಲ್ಲಿ ಸಣ್ಣ ಜಗಳನಡೆದು ಅವಮಾನಿತನಾದ 'ಶರ್ಮ' ಕತ್ತಿಯನ್ನು ಹಿಡಿಯುವ ಸಂದರ್ಭವೊದಗಿತು. ಹಿರೆ ಹಡಗಲಿ ಶಾಸನದ ಪ್ರಕಾರ ಪಲ್ಲವಪ್ರಭು ಶಿವಸ್ಕಂದಶರ್ಮ ಮಾಡಿದ ಅಶ್ವಮೇಧ ಯಾಗದಲ್ಲಿ ಭಾಗವಹಿಸಿದ್ದ ಮಯೂರನು ಅವಮಾನಿತನಾಗಿದ್ದಿರಬಹುದೆಂದು ವಿದ್ವಾಂಸರ ಅಭಿಪ್ರಾಯ.

ಅಂತೂ ಬ್ರಾಹ್ಮಣನಾಗಿದ್ದ ಮಯೂರಶರ್ಮ ಕ್ಷತ್ರಿಯನಾದ ! ಮಯೂರ ವರ್ಮನೆಂದೇ ಹೆಸರುಪಡೆದ !! ಪಲ್ಲವರನ್ನು ಎದುರಿಸಿ ಶ್ರೀ ಶೈಲದ ಸುತ್ತಣ ಪ್ರದೇಶಗಳನ್ನು ಆಕ್ರಮಿಸಿಕೊಂಡನು. ಬೃಹಾದಾರಣ್ಯ (ಬೃಹದಾಣ್ಯ ?) ವಂಶದ ಮಂಡಲೀಕರನ್ನು ಸೋಲಿಸಿ ಅವರಿಂದ ಕಪ್ಪ ಕಾಣಿಕೆಯನ್ನು ಪಡೆದ. ಇವನನ್ನು ಸೋಲಿಸಲಾಗದ ಪಲ್ಲವರು ಇವನೊಂದಿಗೆ ರಾಜಿಮಾಡಿಕೊಂಡರು. ಕನ್ನಡನಾಡಿನಲ್ಲಿ ಸ್ವತಂತ್ರವಾದ ರಾಜ್ಯ ಸ್ಥಾಪನೆಮಾಡಿದ ಈತನನ್ನು ಸಾಕ್ಷಾತ್ ಶಿವಕುಮಾರ ಪ್ರಭುವೇ ಪಟ್ಟಾಭಿಷಿಕ್ತನನ್ನಾಗಿ ಮಾಡಿದ [ಸ್ವಾಮಿ ಮಹಾಸೇನ ಮಾತೃಗಣಾ ನುದ್ಧ್ಯಾಭಿಷಿಕ್ತಾನಾಂ] ಎಂದು ತಾಳಗುಂದ ಶಾಸನದಲ್ಲಿ ಹಾಗೂ ಗುಡ್ನಾಪುರ ಶಾಸನದಲ್ಲಿ ಹೇಳಲಾಗಿದೆ. ಇವರ ವಂಶದ ಮನೆಯಂಗಳದಲ್ಲಿ ಬೆಳೆದಿದ್ದ ಕದಂಬ ವೃಕ್ಷದ ದೆಸೆಯಿಂದ ಇವರ ವಂಶಕ್ಕೂ 'ಕದಂಬವಂಶ' ಎಂಬ ಹೆಸರು ಬಂದಿತಂತೆ! ಈ ಕುರಿತು ಬೇರೆ ಬೇರೆ ಕಥೆಗಳು ಹೇರಳವಾಗಿ ಜನಜನಿತವಾಗಿವೆ

ಮಯೂರವರ್ಮನ ಅನಂತರ ಕಂಗವರ್ಮ, ಭಗೀರಥ, ಕಾಕುತ್ಸ್ಥವರ್ಮ, ಶಾಂತಿವರ್ಮ, ಮೃಗೇಶವರ್ಮ, ರವಿವರ್ಮ ಮತ್ತು ಹರಿವರ್ಮ ಇವರುಗಳು ಕ್ರಮವಾಗಿ ಬನವಾಸಿಯಲ್ಲಿ ರಾಜ್ಯಭಾರ ಮಾಡಿದರು. ಪಲಾಶಿಕ ಅಂದರೆ ಈಗಿನ ಬೆಳಗಾವಿ ಜಿಲ್ಲೆಯ ಹಲಸಿ ಕದಂಬರ ಮತ್ತೊಂದು ರಾಜಧಾನಿಯಾಗಿದ್ದಿತು. ಎನ್ನುವುದಕ್ಕೆ ಸಾಕಷ್ಟು ಪುರಾಣಗಳಿವೆ.

ಕದಂಬರ ಅನಂತರ:-ಕ್ರಿ. ಶ ೫೪೦ ರ ವರೆಗೆ ಕದಂಬರು ಆಳಿದ ಮೇಲೆ ಬಾದಾಮಿಯಲ್ಲಿ ತಲೆಯೆತ್ತಿದ್ದ ಚಾಲುಕ್ಯರು ಕರ್ನಾಟಕ ರಾಜ್ಯಕ್ಕೆ ಕದಂಬರ ಉತ್ತರಾಧಿಕಾರಿಗಳಾಗಿ ಬೆಳಗಿದರು. ಇಮ್ಮಡಿ ಪುಲಿಕೇಶಿ ಬನವಾಸಿಯನ್ನು ವಶಪಡಿಸಿಕೊಂಡನು. ಪುಲಿಕೇಶಿಯ ಅಂತ್ಯಕಾಲದಲ್ಲಿ ಬನವಾಸಿಯನ್ನು ಆಕ್ರಮಿಸಿದ್ದ ಪಲ್ಲವರನ್ನು ಅವನ ಮಗ ವಿಕ್ರಮಾದಿತ್ಯನು ಸುಮಾರು ಕ್ರಿ. ಶ. ೬೪೫ ರಲ್ಲಿ ಹೊಡೆದೋಡಿಸಿದನು. ಚಿಕ್ಕಮಗಳೂರು ಜಿಲ್ಲೆಯ ಕಿಗ್ಗ ಹಾಗೂ ಸೊರಬ ಶಾಸನಗಳಲ್ಲಿ ಗುಣಸಾಗರನೆಂಬ ಆಳುವರಸ [ಆಳ್ವ], ಆತನ ಪತ್ನಿ ಮಹಾದೇವಿ, ಮಗ ಚಿತ್ರವಾಹನ, ವಿಕ್ರಮಾದಿತ್ಯನ ಮೊಮ್ಮಮಗಳೂ ಆದ ಕುಂಕುಮ ಮಹಾದೇವಿ- ಇವರುಗಳ ಹೆಸರುಗಳು ಉಕ್ತವಾಗಿವೆ.

ಮುಂದೆ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ತಮಿಳುನಾಡಿನ ಚೋಳರು, ಹಾನಗಲ್ಲಿನ ಕದಂಬರು, ಬಿಜ್ಜಳಾದಿ ಕಲಚುರ್ಯರು, ಹೊಯ್ಸಳರು, ಸೇಉಣರು, ವಿಜಯನಗರದ ಅರಸರು, ಸೋದೆಯ ಪ್ರಭುಗಳು,-ಹೀಗೆ ಎಲ್ಲರೂ ಒಂದಿಲ್ಲೊಂದು ರೀತಿಯಲ್ಲಿ 'ಬನವಾಸಿ' ಯಲ್ಲಿ ಆಡಳಿತ ನಡೆಸಲು ಜ್ಜುಗಿಸಿದವರೇ ಆಗಿದ್ದಾರೆ. ಒಟ್ಟಾರೆ 'ಬನವಾಸಿ' ಯು ಪ್ರಸಿದ್ಧ ಯಾತ್ರಾಸ್ಥಳ ಮಾತ್ರವಾಗಿರದೆ ರೋಮಾಂಚಕಾರೀ ಐತಿಹಾಸಿಕ ಸ್ಥಳವೂ ಆಗಿರುತ್ತದೆ.

---

ಅಡಿ ಟಿಪ್ಪಣಿ:-(ಇತಿಹಾಸವನ್ನೇ ಹಾಸುಹೊಕ್ಕಾಗಿ ಉಳ್ಳ ಬನವಾಸಿಯ ಪ್ರಾಚೀನತೆಯು ನಮ್ಮ ಗ್ರಾಮೀಣ ಬಂಧುಗಳಿಗೂ ತಕ್ಕಮಟ್ಟಿಗೆ ತಿಳಿಯಲೆನ್ನುವ ಉದ್ದೇಶದಿಂದ ಸ್ಥೂಲವಾದ ಹಿನ್ನೆಲೆಯನ್ನು ಇಲ್ಲಿ ಕೊಡುವ ನಮ್ರ ಪ್ರಯತ್ನ ಮಾಡಲಾಗಿದೆ-

---

# ಮಾನವ ಧರ್ಮ

—ಕೆ. ಎಸ್. ಸ್ವಾಮಿ, ಕ್ಯಾತಸಂದ್ರ
ಅಧ್ಯಾಪಕರು, ಸರ್ಕಾರಿ ಬಾಲಕರ ಪ್ರೌಢಶಾಲೆ, ದಾವಣಗೆರೆ, ಹಳೆಯ ವಿದ್ಯಾರ್ಥಿ.

ಜಗತ್ತು ಜಗದೀಶನದು. ಸರ್ವವೂ ಅವನದು. ಸೃಷ್ಟಿಯನ್ನು ದೃಷ್ಟಿಯಿಟ್ಟು ಅವಲೋಕಿಸಿದಾಗ ಈ ಸತ್ಯ ಸಾಕ್ಷಾತ್ಕಾರವಾಗುತ್ತದೆ. ವ್ಯಕ್ತಿ ಒಂದು ಶಕ್ತಿಯಾಗಲು ಗುರುಕೃಪೆ ಶಿವಕೃಪೆ ಬೇಕು. ಲೋಕಹಿತ ಬಯಸುವವರು ಮೊದಲು ಶುದ್ಧ ಮನುಷ್ಯರಾಗಬೇಕು. ಇವರಿಗೆ ಮಾನವಧರ್ಮ ಬೆನ್ನೆಲುಬಾಗಿರಬೇಕು.

ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಮನಸ್ಸುಳ್ಳವರಾಗಬೇಕು. ರಾಗ ದ್ವೇಷಗಳಿಂದ ದೂರವಾಗಿರಬೇಕು. ಮಾತು ಕೃತಿಗಳಲ್ಲಿ ಸೌಮ್ಯಬೇಕು. ಇಂದು ಮಾನವನಿಗೆ ಮಾನವನೇ ಶತ್ರು. ಪರಹಿತ ತನ್ನ ಹಿತವೆಂದು ಭಾವಿಸುವವರು ಅಲ್ಪ. ಈ ಲೋಕದ ಸುಖ ಸಂಪತ್ತೆಲ್ಲಾ ತನ್ನ ಸ್ವತ್ತಾಗಬೇಕೆಂಬ ದುರಾಸೆಯ ಸುಳಿಯಲ್ಲಿ ಸಿಕ್ಕಿ ಮಾನವ ಕ್ರೂರಪ್ರಾಣಿಯಾಗಿದ್ದಾನೆ. ತನ್ನ ನೈಜಧರ್ಮ ಮರೆತಿದ್ದಾನೆ. ತನ್ನವರನ್ನು ತನ್ನ ದೇಶ ಭಾಷೆಗಳನ್ನು, ತನ್ನ ಅಖಂಡ ಸಂಸ್ಕೃತಿಯನ್ನು ಗಾಳಿಪಟ ಮಾಡಲು ಸಿದ್ಧನಾಗಿದ್ದಾನೆ.

ಮಾನವ ತಪ್ಪುದಾರಿ ಹಿಡಿಯಲು ಕಲುಷಿತ ವಾತಾವರಣ ಕಾರಣ ತಾನು ಬದುಕಿ ಬಾಳುತ್ತಿರುವ ಸಮಾಜದಲ್ಲಿ ತನ್ನ ಗುಣ ಇರುವವರನ್ನೇ ಆರಿಸಿಕೊಂಡು ಮನುಷ್ಯ ಮಹಾ ಮಾನವನಾಗಿರುವುದೂ ಉಂಟು, ಮಹಾ ದಾನವನಾಗಿರುವುದೂ ಉಂಟು.

ರಕ್ಷಾಕವಚ

ವ್ಯಕ್ತಿ ಸಮಾಜಕ್ಕೆ ಮಲ್ಲಿಗೆಯಾಗಬಹುದು. ತನ್ನ ನಡೆನುಡಿಗಳಿಂದ ಸಮಾಜದ ತಮವನ್ನು ಕಳೆಯಬಹುದು. ಇಂತಹ ವ್ಯಕ್ತಿಗಳಿಗೆ ಮಾನವಧರ್ಮ ರಕ್ಷಾಕವಚವಿದ್ದಂತೆ. ಈ ವಿಜ್ಞಾನ ಯುಗದಲ್ಲಿ ಪರೋಪಕಾರವೇ ಮಾನವ ಧರ್ಮದ ಮೂಲ ಮಂತ್ರ. ಈ ಶರೀರವು, ಈ ಸಂಪತ್ತು, ಈ ವಿದ್ಯೆ ಪರರಿಗೆ ಸಹಾಯ ಮಾಡುವ ಸಲುವಾಗಿ ದೇವ ದೇವನಿಂದ ಲಭ್ಯವಾಗಿದೆ ಎಂಬ ಅರಿವು ಮೂಡಬೇಕು. ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ ಶಿವಕೃಪೆಯಿಂದ ಲಭ್ಯವಾದುದನ್ನು ವಂಚನೆಯಿಲ್ಲದೆ. ಸತ್ಪಾತ್ರರಿಗೆ ಹಂಚಿದಾಗ ಜೀವನ ಸಾರ್ಥಕವಾಗುತ್ತದೆ.

ಹಲ್ಲು ಹೋಗಿ ಬೆನ್ನುಬಾಗಿ ಅನ್ಯರಿಗೆ ಹಂಗಾಗುವ ಸಂದರ್ಭದಲ್ಲಿ ಮಾನವ ಧರ್ಮವನ್ನು ಅನುಸರಿಸಿದರೆ ವೃದ್ಧನಾರಿ ಪತಿವ್ರತೆ ಎಂಬಂತಾಗುತ್ತದೆ. ದೇಹದಲ್ಲಿ ಕಸುವು ಇರುವಾಗ ಧರ್ಮವನ್ನು ನಂಬಿದರೆ ಆಯುಷ್ಯ ಹೆಚ್ಚುತ್ತದೆ. ಮನಸ್ಸು ಶುದ್ಧ ಸರೋವರವಾಗುತ್ತದೆ. ಆ ಸರೋವರದಲ್ಲಿ ಬೆಳ್ದಾವರೆಗಳು ಚೆಂದಾವರೆಗಳಂತಹ ನಿರ್ಮಲ ಆಲೋಚನೆಗಳು ಅಲೆಅಲೆಯಾಗಿ ಮೂಡಿಬರುತ್ತವೆ. ಮಾನವರನ್ನೆಲ್ಲಾ ಮಹಾದೇವನೆಂದು, ಅವನ ಪ್ರತಿರೂಪವೆಂದು ತಿಳಿದಾಗ ವಿಶ್ವಕಲ್ಯಾಣವಾಗುತ್ತದೆ.

'ಧರ್ಮಕ್ಕೆ ಜಯವಾಗಲಿ ಮಾನವ ಧರ್ಮಕ್ಕೆ ಜಯವಾಗಲಿ' ಎಂದು ಸಾರಿ ಸಾರಿ ಹೇಳಿದ ಪುಣ್ಯಾತ್ಮರು ಮಹಾತ್ಮರು ಕೈಲಾಸವಾಸಿಗಳಾಗಿರುವ ಶ್ರೀ ಶ್ರೀ ವೀರಗಂಗಾಧರ ರಂಭಾಪುರಿ ಮಹಾ ಸ್ವಾಮಿಗಳು ಇವರ ದೃಷ್ಟಿಯಲ್ಲಿ ಪೈಗಂಬರ್, ಏಸು, ಬುದ್ಧ, ಮಹಾವೀರ, ಶಂಕರ, ಮಧ್ವ, ರಾಮಾನುಜ, ಬಸವೇಶ್ವರ, ರಾಮಕೃಷ್ಣ, ರಮಣ, ಅರವಿಂದ ಈ ಎಲ್ಲಾ ಮಹಿಮರು ಸಾರಿದ ದಿವ್ಯ ಭವ್ಯ ಉಪದೇಶಗಳೆಲ್ಲಾ ಮಾನವಧರ್ಮದ ಸೋಪಾನಗಳು.

ಮಾನವರು ವಿಶ್ವಮಾನರಾಗಲು ಮಾನವಧರ್ಮವೊಂದೇ ಹೆದ್ದಾರಿ. ನಮ್ಮ ಸತ್ಪುರುಷರು ತಿಳಿಸಿರುವ ದಯೆ, ಕರುಣೆ, ಅಹಿಂಸೆ, ಉಪಕಾರ, ಪರಧರ್ಮ ಸಹಿಷ್ಣುತೆ, ಸ್ವಧರ್ಮ ಆಚರಣೆ, ಈ ಮಹೋನ್ನತ ಗುಣಗಳನ್ನು ಮಾತಿನಲ್ಲೂ ಕೃತಿಯಲ್ಲೂ ತೋರಿಸಿದಾಗ ಮನುಷ್ಯ ಜನ್ಮ ಸಾಫಲ್ಯ ಪಡೆಯುತ್ತದೆ.

ಆಡಂಬರದ ಧರ್ಮಾಚರಣೆ, ಆಡಂಬರದ ಸಮಾಜೋದ್ಧಾರ ಮರಳಿನಲ್ಲಿ ಮನೆಕಟ್ಟಿದಂತೆ. ನಮ್ಮ ವ್ಯಕ್ತಿತ್ವ ನಮ್ಮ ಮುಂದೆಯೇ ಕುಸಿಯುತ್ತದೆ, ಮಣ್ಣು ಮುಕ್ಕುತ್ತದೆ. ಈ ಯತಾರ್ಥ ಸತ್ಯ ಕಲ್ಪನೆಯಿಂದ ಮಾನವಧರ್ಮವನ್ನು ಜೀವನಕ್ಕೆ ಅಳವಡಿಸಿಕೊಂಡಾಗ ನೆಮ್ಮದಿ ದೊರೆಯುತ್ತದೆ. ಬಾಳಿಗೆ ಅರ್ಥ ಬರುತ್ತದೆ. ●

---

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ! ಸಮುದ್ರದ ತಡಿಯಲೊಂದು ಮನೆಯ ಮಾಡಿ, ನೊರೆ ತೆರೆಗಳಿಗಂಜಿದಡೆಂತಯ್ಯ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ! ಚನ್ನಮಲ್ಲಿಕಾರ್ಜುನದೇವ ಕೇಳಯ್ಯ! ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

—ಮಹಾದೇವಿ ಅಕ್ಕ

# ಸೋಮರಸ

—ಹೆಚ್. ರೇವಣಸಿದ್ದಪ್ಪ. ಎಂ. ಎ.

ಲೆಕ್ಚರರ್ ಇನ್ ಹಿಸ್ಟ್ರಿ. ಶ್ರೀ ಸಿದ್ಧಗಂಗಾ ಕಾಲೇಜ್, ತುಮಕೂರ್-572102.

ವೇದಗಳ ಕಾಲದಿಂದ ಸೋಮರಸದ ಬಳಕೆಯನ್ನು ಭಾರತದಲ್ಲಿ ಮತ್ತು ನೆರೆಹೊರೆ ದೇಶಗಳಲ್ಲಿ ಕಾಣಬಹುದು ಸೋಮರಸವನ್ನು ಆಯುರ್ವರ್ಧನಗಾಗಿ, ಬುದ್ಧಿವರ್ಧನೆದಾಗಿ ಬಳಸಲಾಗುತ್ತಿತ್ತು. ನಿತ್ಯ ಯವ್ವನದ ಸಂಕೇತವೇ ಸೋಮ ರಸವಾಗಿತ್ತು. ಋಷಿಗಳು, ಅರಸರು, ಶ್ರೀಮಂತರು ಸೋಮರಸವನ್ನು ವಿಷೇಶವಾಗಿ ಬಳಸುತ್ತಿದ್ದುದನ್ನು ವೇದಗಳ, ಮಹಾಕಾವ್ಯಗಳ ವರ್ಣನೆಗಳಲ್ಲಿ ಕಾಣುತ್ತೇವೆ.

ಈಗ ಸೋಮರಸದ ಬದಲು ಇತರ ಮಾದಕ ವಸ್ತುಗಳ ಬಳಕೆ ಹೆಚ್ಚುತ್ತಿರುವುದನ್ನು ಕಾಣುತ್ತೇವೆ ಆದರೂ 60 ವರ್ಷಗಳಿಂದ ಸೊಮ ಸಸ್ಯಗಳನ್ನು ವಿಷೇಶವಾಗಿ ಜರ್ಮನಿ ಮೊದಲಾದ ದೇಶಗಳು ಕಾಶ್ಮೀರ ಸರಕಾರದಿಂದ ಆಮದು ಮಾಡಿಕೊಳ್ಳುತ್ತಿವೆ. ಸೋಮ ಸಸ್ಯಗಳಿಂದ ಆಧುನಿಕ ರೀತಿಯ ಪಾನೀಯಗಳನ್ನು ಉತ್ತೇಜಕಗಳನ್ನು (ಟಾನಿಕ್‌ಗಳನ್ನು) ತಯಾರಿಸುತ್ತಿದ್ದಾರೆ.

ಈ ಸೋಮ ಸಸ್ಯಗಳಲ್ಲಿ 24 ವರ್ಗಗಳನ್ನು ಮಾಡಿದ್ದಾರೆ.

ವೇದಗಳಲ್ಲಿ ಕಂಡುಬರುವ ಸೋಮಫಲವು ಮುಂಜುವಾನ ಸೋಮ ಎಂಬ ವರ್ಗದ ಫಲ. ಇದು ಹಿಮಾಲಯದ 16000 ಅಡಿಗಳ ಎತ್ತರದ ಮೌಜವಾನ ಪರ್ವತಶ್ರೇಣಿಗಳ ಪ್ರದೇಶಗಳಲ್ಲಿ ಬೆಳೆಯುತ್ತದೆ. ಇದನ್ನು ಸಸ್ಯಶಾಸ್ತ್ರದಲ್ಲಿ "ಸರ್ಕೋಸ್‌ಟೆಮ್ಮಾ ವಿಮಿನೇಲ್" ಅಥವಾ "ಅಸಕೇಪಿಯಾಸ್ ಆ್ಯಸಿಡಾ" ಎಂದು ಕರೆಯುತ್ತಾರೆ. ಸರ್. ಎ. ಸ್ಟೀನ್ ಎಂಬುವರ ದೃಷ್ಟಿಯಲ್ಲಿ ಇದು ಒಂದು ಅರಣ್ಯ ರೊಹುಬಾಬ್.

ಸುಶ್ರುತ ಸಂಹಿತೆಯಲ್ಲಿ ಸುಶ್ರುತಋಷಿವೈದ್ಯನು 24 ಸೋಮಸಸ್ಯ ವರ್ಗಗಳನ್ನು ಹೆಸರಿಸಿದ್ದಾನೆ.

1 ಅಂಶುಮಾನ್ ಸೋಮ
2 ಮುಂಜುವಾನ್ ಸೋಮ
3 ಚಂದ್ರಮಾನ್ ಸೋಮ
4 ರಜತ ಪ್ರಭ ಸೋಮ
5 ದೂರ್ವ ಸೋಮ
6 ಕಣಿಯಾನ್ ಸೋಮ
7 ಸ್ವೇತಾಕ್ಷಿ ಸೋಮ
8 ಕನಕಪ್ರಭ ಸೋಮ

9 ಪ್ರತಾನವಾನ್ ಸೋಮ
10 ತಲಪ್ರಿಂತ ಸೋಮ
11 ಕರವೀರ ಸೋಮ
12 ಅಂಶವಾನ್ ಸೋಮ
13 ಸ್ವಯಂ ಪ್ರಭಸೋಮ
14 ಮಹಾಸೋಮ
15 ಗರುಡಹೃತ ಸೋಮ
16 ಗಾಯತ್ರ ಸೋಮ
17 ತ್ರೈಸ್ತುಭ ಸೋಮ
18 ಪಂಕಟ ಸೋಮ
19 ಶಂಕರ ಸೋಮ
20 ಅಗ್ನಿ ಸೋಮ
21 ರೈವತ ಸೋಮ
22 ತ್ರಿಪಾದ ಸೋಮ
23 ಗಾಯತ್ರಿಯುಕ್ತ ಸೋಮ
24 ಉಡುಪತಿ ಸೋಮ

ಮಂಜುವಾನ್ ಸೋಮ ಸಸ್ಯವು 15 ಎಲೆಗಳಿಂದ ಕೂಡಿರುತ್ತದೆ. ಇದು ಬಾಳೆಯ ಗಿಡವನ್ನು ಹೋಲುತ್ತದೆ. ಒಂದೊಂದು ಎಲೆಯು ಕೃಷ್ಣಪಕ್ಷದ ಮೊದಲ ದಿನದಿಂದ ಪೂರ್ಣಿಮೆಯವರೆಗೆ ಬೆಳೆಯುತ್ತದೆ 15 ಎಲೆಗಳು ಮೂಡಿದ ಮೇಲೆ ದಿನಕ್ಕೊಂದರಂತೆ ಒಂದೊಂದೆ ಎಲೆ ಕಳಚಿ ಬೀಳುತ್ತದೆ. ಸೋಮರಸವು ಹಾಲಿನಲ್ಲಿ ಹಾಕಿದಾಗ ಹೊಳೆಯುವ ಬಿಂದುವಿನಂತೆ ತೇಲುತ್ತದೆ.

ಮಂಜುವಾನ್ ಸೋಮದ ಎಲೆಗಳ ವಾಸನೆ ಬೆಳ್ಳುಳ್ಳಿಯ ವಾಸನೆಯಂತೆ ಇರುತ್ತದೆ.

ಅಂಶುವಮಾನ್ ಸೋಮದ ಬೇರುಗಳ ವಾಸನೆ ತುಪ್ಪದ ವಾಸನೆಯಂತೆ ಇರುತ್ತದೆ.

ಚಂದ್ರಮಾನ್ ಸೋಮ ಸಸ್ಯವರ್ಗವು ಬಂಗಾರದ ಬಣ್ಣದಿಂದ ಹೊಳೆಯುತ್ತಿರುತ್ತದೆ. ಇದು ಜಲಾಶಯ ಹತ್ತಿರ ಹೆಚ್ಚಾಗಿ ಬೆಳೆಯುತ್ತದೆ. ರಾತ್ರಿಯಲ್ಲಿ ಇವು ಸ್ವಪ್ರಕಾಶದಿಂದ ಹೊಳೆಯುತ್ತಿರುತ್ತವೆ.

ಈ ಸೋಮ ಸಸ್ಯಗಳು ವಿಶೇಶವಾಗಿ ಹಿಮಾಲಯದ ಶ್ರೇಣಿಗಳಲ್ಲಿ ಅಲ್ಲದೇ ಮಾನಸ ಸರೋವರ ಪ್ರದೇಶಗಳಲ್ಲಿ ಅರೂಢ ಶ್ರೇಣಿಗಳಲ್ಲಿ, ಸಹ್ಯಾದ್ರಿ ಶ್ರೇಣಿಗಳಲ್ಲಿ, ಮಹೇಂದ್ರ ಪರ್ವತಗಳಲ್ಲಿ, ಮಲಯ ಪರ್ವತಗಳಲ್ಲಿ, ಶ್ರೀ ಶೈಲಶ್ರೇಣಿಗಳಲ್ಲಿ, ದೇವಗಿರಿಶ್ರೇಣಿಗಳಲ್ಲಿ, ದೇವಸಹಗಿರಿ ಪರಿಪಾತ್ರಗಳಲ್ಲಿ, ವಿಧ್ಯಾ ಪರ್ವತಗಳಲ್ಲಿ, ದೇವಸುಂದರ ಸರೊವರ ಪ್ರದೇಶಗಳಲ್ಲಿ ಬೆಳೆಯುತ್ತವೆ.

ಗ್ರಂಥಋಣ:

Monier Williams: Dictionary of Sanskrit English
B. P. Kava: Soma juice.

ಸಿದ್ಧಗಂಗಾ

# ಕುಷ್ಠರೋಗ ಒಂದು ಸಾಮಾಜಿಕ ಪಿಡುಗು

ಹೆಚ್. ಎಸ್. ಸಿದ್ಧಗಂಗಪ್ಪ. ಎಂ. ಎ.

ರೋಗ ನಿವಾರಕ ಮತ್ತು ಸಾಮಾಜಿಕ ವೈದ್ಯ ವಿಭಾಗ, ಬೆಂಗಳೂರು ವೈದ್ಯ ಕಾಲೇಜು,
ಬೆಂಗಳೂರು-560002

ಕುಷ್ಠ ರೋಗವ್ಯಕ್ತಿಗಳಿಗೆ ಮಾತ್ರ ಸೀಮಿತವಾದ ಚರ್ಮ ರೋಗ. ಸಾವಿರಾರು ವರ್ಷಗಳಿಂದ ಸಮಾಜದಲ್ಲಿ ಉಳಿದು ಬಂದಿರುವ ಒಂದು ಅಂಟು ರೋಗ. ಈ ರೋಗ ವ್ಯಕ್ತಿಗಳಲ್ಲಿ ಕಾಣಿಸಿಕೊಂಡು ಉಲ್ಬಣಾವಸ್ಥೆಗೆ ಹೋದಾಗ ಅಂಗ ವೈಕಲ್ಯ, ಕುರೂಪ ಉಂಟಾಗುವುದರಿಂದ ಇದೊಂದು ಭಯಂಕರ ಹಾಗೂ ವಾಸಿ ಮಾಡಲಾಗದಂತಹ ರೋಗವೆಂದು ಪರಿಗಣಿಸಲ್ಪಟ್ಟಿದೆ. ಈ ರೋಗ ಸಮಾಜದಲ್ಲಿ ಹೆಚ್ಚಾಗಲು ಮುಖ್ಯ ಕಾರಣ ಜನರಲ್ಲಿ ಮನೆಮಾಡಿಕೊಂಡಿರುವ ಮೂಢನಂಬಿಕೆ, ತಪ್ಪು ಕಲ್ಪನೆ. ರೋಗಪೀಡಿತ ವ್ಯಕ್ತಿ ಆಕಾಶವೇ ತಲೆಮೇಲೆ ಬಿದ್ದಂತೆ ವರ್ತಿಸುತ್ತಾನೆ. ಹಿಂದಿನ ಜನ್ಮದಲ್ಲಿ ನಾವು ಮಾಡಿದ ಪಾಪದ ಫಲ, ದೇವರು ಸರಿಯಾದ ಶಿಕ್ಷೆನೀಡಿದ್ದಾನೆ. ಎಂಬ ಪಾಪಪ್ರಜ್ಞೆ ದೈಹಿಕ ಹಾಗೂ ಮಾನಸಿಕವಾಗಿ ದುಷ್ಪರಿಣಾಮವನ್ನು ಬೀರುತ್ತದೆ. ಕುಷ್ಠರೋಗಿಗಳಿಗೆ ಸಮಾಜದಲ್ಲಿ ಮನ್ನಣೆ, ಗೌರವದೊರಕದೆ, ಸಹಬಾಳ್ವೆ ನಡೆಸಲು ಸೂಕ್ತ ಅವಕಾಶವಿಲ್ಲದೆ ಸಮಾಜದಿಂದ ವಂಚಿತರಾಗಿದ್ದಾರೆ.

ಪ್ರಾರಂಭದ ಹಂತದಲ್ಲಿ ವೈದ್ಯರಿಗೆ ತೋರಿಸಿ ಸೂಕ್ತ ಚಿಕಿತ್ಸೆ ಪಡೆಯದೆ, ಉದಾಸಿನ ತೋರುತ್ತಾರೆ ರೋಗ ಬೆಳವಣಿಗೆಯಾಗಿ ಅದರ ತೀಕ್ಷ್ಣತೆ ದೇಹದ ಮೇಲೆ ಉಂಟಾಗಿ ಕುಷ್ಠರೋಗ ಎಂಬ ಲೇಬಲ್‌ನ್ನು ಹಚ್ಚಿಸಿಕೊಂಡಾಗ, ರೋಗ ಪೀಡಿತ ವ್ಯಕ್ತಿ ಇತರರಿಗಿಂತ ಭಿನ್ನ, ಯಾರಿಗೂ ಬೇಡವಾದವನು ಎಂಬ ಮನೋಭಾವದಿಂದ, ಮಾನಸಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ದೂರವಾಗುತ್ತಾ ಅಥವಾ ಕಳಚಿಕೊಳ್ಳುತ್ತಾ ಹೋಗುತ್ತಾನೆ. ಸಮಾಜದಲ್ಲಿ ಕುಟುಂಬದಲ್ಲಿ ಆತ್ಮೀಯವಾಗಿ ಬೆರೆಯಲು ಸಾಧ್ಯವಾಗದೆ ತೊಳಲಾಡುತ್ತಾನೆ. ಇದಕ್ಕೆಲ್ಲಾ ಕಾರಣ ಕುಷ್ಠರೋಗದ ಬಗ್ಗೆ ಸಮಾಜದಲ್ಲಿ ಹಬ್ಬಿರುವ ತಪ್ಪುಕಲ್ಪನೆ. ಇದೊಂದು ವಾಸಿಯಾಗದಂತಹ, ಜೀವವನ್ನೇ ತೆಗೆದುಕೊಂಡು ಹೋಗುವಂತಹ ಮಹಾ ರೋಗ ಎಂಬ ಭಾವನೆ.

ವಿಶ್ವ ಆರೋಗ್ಯ ಸಂಸ್ಥೆ ಒಂದು ಪ್ರಕಟಣೆ ಹೊರಡಿಸಿ 2000 ಇಸವಿಯ ವೇಳೆಗೆ ಎಲ್ಲರಿಗೂ ಆರೋಗ್ಯ ದೊರೆಯುವಂತೆ ಮಾಡಬೇಕೆಂಬ ಯೋಜನೆಯನ್ನು

ಹಮ್ಮಿಕೊಂಡು ಈಗಾಗಲೆ ಕಾರ್ಯೋನ್ಮುಖವಾಗಿವೆ. ಈ ಕಾರ್ಯ ಯೋಜನೆಯಡಿಯಲ್ಲಿ ಕುಷ್ಠರೋಗದ ನಿಯಂತ್ರಣ ಹಾಗೂ ನಿರ್ಮೂಲನವೂ ಸೇರಿದೆ. ಕೇಂದ್ರ ಸರ್ಕಾರದ 20 ಅಂಶಗಳ ಕಾರ್ಯಕ್ರಮದಲ್ಲಿ ಕುಷ್ಠರೋಗ ನಿರ್ಮೂಲನವೂ ಸೇರಿದೆ.

ಒಂದು ಸಾಮಾಜಿಕ ಸಮಸ್ಯೆಯಾಗಿ ಕಾಡುತ್ತಿರುವ ಕುಷ್ಠರೋಗ, ಅಂಕಿ ಅಂಶಗಳ ಪ್ರಕಾರ ವಿಶ್ವದಲ್ಲಿ 1.5 ಕೋಟಿಗಿಂತಲೂ ಹೆಚ್ಚು ರೋಗಿಗಳಿದ್ದಾರೆ. ಭಾರತದಲ್ಲಿ ಸುಮಾರು 32 ಲಕ್ಷವಿದ್ದರೆ, ಕರ್ನಾಟಕದಲ್ಲಿ ಸುಮಾರು 2 ಲಕ್ಷ ಜನಕ್ಕಿಂತಲೂ ಹೆಚ್ಚಾಗಿ ಕುಷ್ಠರೋಗದ ಕಪಿಮುಷ್ಠಿಯಲ್ಲಿ ಸಿಕ್ಕಿ ತೊಳಲಾಡುತ್ತಿದ್ದಾರೆ. ಇತ್ತೀಚಿನ ವರದಿಯ ಪ್ರಕಾರ ರಾಜ್ಯದಲ್ಲಿ ಪರೀಕ್ಷಿಸಲಾದ 129.55 ಲಕ್ಷ ಮಂದಿಯ ಪೈಕಿ ಸಾವಿರಕ್ಕೆ 5.2 ರಷ್ಟು ಮಂದಿಯಲ್ಲಿ ಕುಷ್ಠರೋಗವಿರುವುದು ಕಂಡು ಬಂದಿದೆ. ಸಮೀಕ್ಷೆಯ ಪ್ರಕಾರ 1.24,600 ಜನ ರೋಗಿಗಳ ಪೈಕಿ 12,575 ಜನರಲ್ಲಿ ವಿರೂಪ ಕುಷ್ಠರೋಗ ಇರುವುದು ಕಂಡು ಬಂದಿದೆ. ರಾಜ್ಯದ 26 ಸಾವಿರಕ್ಕೂ ಹೆಚ್ಚು ಹಳ್ಳಿಗಳಲ್ಲಿ 19779 ಗ್ರಾಮಗಳನ್ನು ಕುಷ್ಠರೋಗ ನಿಯಂತ್ರಣ ಕಾರ್ಯಕ್ಕೆ ಒಳಪಡಿಸಲಾಗಿತ್ತು. ಇತ್ತೀಚೆಗೆ 12600 ಹಳ್ಳಿಗಳಲ್ಲಿ ಕುಷ್ಠರೋಗದ ಬಗ್ಗೆ ಸಮೀಕ್ಷೆಯನ್ನು ಪೂರ್ಣಗೊಳಿಸಲಾಗಿದೆ.

ಕುಷ್ಠರೋಗ, ಕ್ಷಯ, ಟೈಫಾಯಿಡ್, ಇತ್ಯಾದಿ ರೋಗಗಳಂತೆ ಅಣುಗಳಿಂದುಟಾಗುವ ಅಂಟು ರೋಗ. ಈ ಅಣುಗಳು ಕ್ಷಯರೋಗದ ಅಣುಗಳನ್ನು ಹೋಲುತ್ತವೆ. ಹಾಗೂ ಅದೇ ಬುಡಕಟ್ಟಿಗೆ ಸೇರಿವೆ. ಸಾಮಾನ್ಯವಾಗಿ ಕುಷ್ಠರೋಗವು ಒಬ್ಬರಿಂದ ಒಬ್ಬರಿಗೆ ಸುಲಭವಾಗಿ ಹರಡುವುದಿಲ್ಲವಾದರೂ ಒಂದೇ ಮನೆಯಲ್ಲಿ ವಾಸಿಸುವವರಲ್ಲಿ ದೀರ್ಘಕಾಲ ದೈಹಿಕ ಸಂಪರ್ಕ ಹೊಂದುವವರಲ್ಲಿ ಹರಡುತ್ತದೆ. ಕುಷ್ಠರೋಗವನ್ನು ಪ್ರಾರಂಭದ ಹಂತದಲ್ಲಿ ಗುರುತಿಸುವುದು ಕಷ್ಟ. ರೋಗದ ಅಂಟು ಒಬ್ಬರಿಂದ ಮತ್ತೊಬ್ಬರಿಗೆ ತಗುಲಿದ 3 ರಿಂದ 5 ವರ್ಷಗಳ ನಂತರ ಪ್ರತಿರೋಧನ ಶಕ್ತಿ ಕಡಿಮೆ ಇರುವವರಲ್ಲಿ ರೋಗದ ಮೊದಲ ಚಿಹ್ನೆಗಳು ಕಾಣಿಸಿಕೊಳ್ಳುತ್ತವೆ. ಈ ರೋಗ ಹೆಚ್ಚಾಗಿ ಹರಡಲು ಕಾರಣ, ನಗರ, ಪಟ್ಟಣಗಳಲ್ಲಿ ಕಂಡುಬರುವ ದಟ್ಟವಾದ ಜನಸಂದಣಿ ಸ್ಥಳಗಳಾದ ಮಾರ್ಕೆಟ್, ಸಿನಿಮಾ ಮಂದಿರ, ಸಂತೆ, ಬಸ್ಸು ಮುಂತಾದ ಸ್ಥಳಗಳಲ್ಲಿ ರೋಗಿಗಳು ಇತರರೊಡನೆ ಸಂಪರ್ಕ ಪಡೆಯುವುದರಿಂದ ಹಾಗೂ ಪೌಷ್ಠಿಕತೆಯ ಅಭಾವ, ನಿರಕ್ಷರತೆ ಮತ್ತು ರೋಗದ ಬಗ್ಗೆ ಸೂಕ್ತ ತಿಳುವಳಿಕೆ ಇಲ್ಲದಿರುವುದೇ ಆಗಿದೆ.

ರೋಗದ ಚಿಹ್ನೆಗಳು:–ಕುಷ್ಠರೋಗ ಮುಖ್ಯವಾಗಿ ಚರ್ಮ ಮತ್ತು ನರ

ಗಳಿಗೆ ಸಂಬಂಧಿಸಿದ ಕಾಯಿಲೆ. ರೋಗವು ಮೊದಲ ಹಂತದಲ್ಲೇ ದೇಹದ ಯಾವ ಭಾಗದ ಮೇಲಾದರೂ ಒಂದು ಚಿಕ್ಕ ಮಚ್ಚೆಯಾಗಿ ಕಾಣಿಸಿಕೊಂಡು ನಂತರ ರೋಗಿಯ ಪ್ರತಿರೋಧನ ಶಕ್ತಿಗನುಸಾರವಾಗಿ ಮುಂದುವರಿಯಬಹುದು. ದೇಹದ ಯಾವ ಭಾಗದಲ್ಲೇ ಆಗಲಿ ಸ್ಪಷ್ಟವಾದ ಮಚ್ಚೆಗಳು ಇದ್ದು ಆ ಮಚ್ಚೆಗಳು ಸ್ಪರ್ಶಜ್ಞಾನ, ನೋವು ಮತ್ತು ಶೀತೋಷ್ಣಗಳ ಅರಿವನ್ನು ಕಳೆದುಕೊಂಡಿದ್ದರೆ ಅದು ಬಹುಮಟ್ಟಿಗೆ ಕುಷ್ಠರೋಗದ ಮಚ್ಚೆಯಾಗಿರುತ್ತದೆ. ಈ ಹಂತದಲ್ಲಿ ರೋಗಿಯು ಸೂಕ್ತ ಚಿಕಿತ್ಸೆ ಪಡೆದರೆ, ಯಾವುದೇ ರೀತಿಯ ದುಷ್ಪರಿಣಾಮಕ್ಕೆ ಬಲಿಯಾಗದೆ ಗುಣಮುಖನಾಗುವ ಸಾಧ್ಯತೆ ಹೆಚ್ಚು.

ನಿರ್ಲಕ್ಷ್ಯ, ಉದಾಸೀನದಿಂದ ರೋಗವನ್ನು ಬೆಳೆಯಲು ಬಿಟ್ಟರೆ ಮುಖ್ಯ, ಕೈಕಾಲುಗಳು, ನರಗಳು ದಪ್ಪವಾಗಬಹುದು. ಅಲ್ಲದೆ ಅಂಗೈ, ಕಾಲು, ಪಾದ ಹಾಗೂ ಮುಖವು ಸ್ಪರ್ಶ, ನೋವು, ಶೀತೋಷ್ಣ, ಇವುಗಳ ಅರಿವನ್ನು ಕಳೆದುಕೊಳ್ಳುವುದರ ಜೊತೆಗೆ ಕಣ್ಣಿನ ನರಗಳಿಗೂ ಹಾನಿಯುಂಟಾಗಿ ಕೈ ಬೆರಳುಗಳು ಮರಗಟ್ಟಿ, ಕ್ರಮೇಣ ಬಗ್ಗಿಕೊಳ್ಳುತ್ತವೆ. ಹೆಬ್ಬೆರಳು ಹಿಂದಕ್ಕೆ ವಾಲಬಹುದು, ಕಳಚಿ ಬೀಳಬಹುದು.

ಈ ರೋಗದ ಕಪಿಮುಷ್ಟಿಯಿಂದ ಬಿಡುಗಡೆ ಹೊಂದಲು ಹಾಗೂ ನಿಯಂತ್ರಿಸಲು ವ್ಯಕ್ತಿಗಳ ದೇಹದ ಯಾವುದೇ ಭಾಗದಲ್ಲಿ ಆಗಲಿ ಸ್ಪಷ್ಟವಾದ ಮಚ್ಚೆಗಳಿದ್ದು, ಆ ಮಚ್ಚೆಯು ಸ್ಪರ್ಶಜ್ಞಾನ ನೋವು, ಶೀತೋಷ್ಣಗಳ ಅರಿವನ್ನು ಕಳೆದುಕೊಂಡಿದ್ದರೆ, ಅದು ಬಹುತೇಕ ಕುಷ್ಠರೋಗದ ಮಚ್ಚೆಯಾಗಿರುತ್ತದೆ. ಆದ್ದರಿಂದ ಸಂಶಯಾಸ್ಪದವಾದ ಮಚ್ಚೆಯಿದ್ದು ಅದು ಒಂದೆರಡು ವಾರಗಳಲ್ಲಿ ಗುಣವಾಗದಿದ್ದರೆ, ಸಂಕೋಚ, ಭಯ, ಉದಾಸೀನ ಮನೋಭಾವವನ್ನು ಬಿಟ್ಟು ನೇರವಾಗಿ ವೈದ್ಯರಲ್ಲಿಗೆ ಹೋಗಿ ತೋರಿಸಿ ಸೂಕ್ತ ಸಲಹೆ ಹಾಗೂ ಚಿಕಿತ್ಸೆಯನ್ನು ಪಡೆಯುವುದು ಆರೋಗ್ಯಕರ.

ಚಿಕಿತ್ಸೆ: ಹಿಂದಿನ ಕಾಲದಲ್ಲಿ ಕುಷ್ಠರೋಗವನ್ನು ಗುಣಪಡಿಸುವ ಔಷಧಿಗಳು ದೊರೆಯುತ್ತಿರಲಿಲ್ಲ. ಇದರಿಂದ ರೋಗ ಉಲ್ಬಣಗೊಂಡು ಜೀವನ ಪರ್ಯಂತ ನರಳಿ, ಕೊರಗಿ ಜೀವನದ ಅಂತಿಮ ಯಾತ್ರೆಯನ್ನು ಕೈಗೊಳ್ಳುತ್ತಿದ್ದರು. ಹೀಗಾಗಿ ಸಮಾಜದಲ್ಲಿ ಕುಷ್ಠರೋಗ ಎಂದರೆ ಯಮನ ಶಾಪವೆಂದೇ ಭಾವಿಸಿ ಭಯಪಡುತ್ತಿದ್ದರು. ರೋಗ ಪೀಡಿತ ವ್ಯಕ್ತಿಗಳನ್ನು ಸಮಾಜದಿಂದ ಬಹಿಷ್ಕರಿಸುತ್ತಿದ್ದರು. ಅಂತಹವರು ಸಮಾಜದಲ್ಲಿ ನೆಲೆ, ಬೆಲೆ ಇಲ್ಲದೆ ಜೀವನ ನಿರ್ವಹಣೆಗಾಗಿ ಭಿಕ್ಷುಕ ವೃತ್ತಿಯನ್ನು ಅವಲಂಬಿಸುತ್ತಿದ್ದರು. ಈಗಲೂ ಸಹ ಇಂಥ ನತದೃಷ್ಟರನ್ನು ದಿನ ನಿತ್ಯ ನಾವು ನೋಡುತ್ತಲೇ ಇದ್ದೇವೆ.

ಈಗ ವೈದ್ಯಕೀಯ ಕ್ಷೇತ್ರದಲ್ಲಿ ಗಮನಾರ್ಹವಾದ ಸಂಶೋಧನೆಗಳು ನಡೆದು

ಅನೇಕ ರೋಗಗಳಿಗೆ ಕಾರಣವನ್ನು ಕಂಡುಹಿಡಿಯುವುದರ ಜೊತೆಗೆ ಅದರ ನಿಯಂತ್ರಣ ಹಾಗೂ ನಿರ್ಮೂಲನದ ಬಗ್ಗೆ ಸಾಕಷ್ಟು ಔಷಧಿಗಳನ್ನು ಕಂಡುಹಿಡಿದಿದ್ದಾರೆ. ಸುಮಾರು 30 ವರ್ಷಗಳಿಂದೀಚೆಗೆ ಬಳಕೆಯಲ್ಲಿರುವ "ಡ್ಯಾಪ್ಸೋನ್" ಮಾತ್ರೆಗಳು ಸೇವಿಸಲು ಸಣ್ಣದಾಗಿದ್ದ ಸುಲಭ ಬೆಲೆಗೆ ಔಷಧಿ ಅಂಗಡಿಗಳಲ್ಲಿ ದೊರೆಯುತ್ತವೆ. ಅಲ್ಲದೆ ಆಸ್ಪತ್ರೆಗಳಲ್ಲಿ ಉಚಿತವಾಗಿ ಸಿಗುವ ಈ ಮಾತ್ರೆಗಳನ್ನು ನಿಯಮಿತವಾಗಿ ಉಪಯೋಗಿಸುವುದರಿಂದ ರೋಗ ಹರಡದಂತೆ ತಡೆಯುವುದರ ಜೊತೆಗೆ ಪ್ರಾರಂಭಾವಸ್ಥೆಯಲ್ಲಿರುವ ರೋಗಿಗಳು ಅಂಗ ವಿಕಲರಾಗುವುದನ್ನು ತಪ್ಪಿಸಬಹುದು. ಆದರೆ ರೋಗ ಅಂತಿಮ ಘಟ್ಟವನ್ನು ಮುಟ್ಟಿದಾಗ ಈ ಮಾತ್ರೆಗಳಿಂದ ದುಷ್ಪರಿಣಾಮಗಳನ್ನು ನಿಯಂತ್ರಿಸಲು ಸಾಧ್ಯವಾಗುವುದಿಲ್ಲ.

**ಕುಷ್ಠರೋಗದ ನಿಯಂತ್ರಣ :** ಸಾಮಾಜಿಕ ಪಿಡುಗಾಗಿರುವ ಕುಷ್ಠರೋಗವನ್ನು ತಡೆಗಟ್ಟುವ ಹಾಗೂ ನಿರ್ಮೂಲನ ಮಾಡಲು ಕೆಲವು ಅಗತ್ಯ ಕ್ರಮಗಳನ್ನು ಸರ್ಕಾರದ ಜೊತೆಗೆ ಲಯನ್ಸ್, ರೋಟರಿ ಮುಂತಾದ ಸ್ಥಳೀಯ ಸಂಘಸಂಸ್ಥೆಗಳು, ಸಾರ್ವಜನಿಕರು ಕೈಗೊಳ್ಳಬೇಕು.

ಕುಷ್ಠರೋಗಿಗಳಿರುವ ಪ್ರದೇಶದಲ್ಲಿ ಅಲ್ಲಿರುವವರನ್ನೆಲ್ಲಾ ಪ್ರಾಥಮಿಕ ಪರೀಕ್ಷೆಗೆ ಒಳಪಡಿಸಬೇಕು. ಅಲ್ಲದೆ ಶಾಲಾ ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳು, ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರು, ಕಾಮಗಾರಿಕೆಯಲ್ಲಿ ತೊಡಗಿರುವವರು, ಭಿಕ್ಷುಕರು ಇತ್ಯಾದಿಯವರನ್ನು ಪರೀಕ್ಷೆಗೆ ಒಳಪಡಿಸಿ, ಅವರಲ್ಲಿ ಯಾರಿಗಾದರೂ ರೋಗವಿದೆಯೇ ಎಂಬುದನ್ನು ಪತ್ತೆಹಚ್ಚಿ ಅಂಥವರಿಗೆ ಚಿಕಿತ್ಸೆ ನೀಡಬೇಕು:

ಕುಷ್ಠರೋಗದ ಬಗ್ಗೆ ಸಾರ್ವಜನಿಕರಲ್ಲಿ ತಿಳುವಳಿಗೆ ಮೂಡಿಸಲು, ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಲು, ಸಾಕ್ಷ್ಯ ಚಿತ್ರಗಳು, ಬಿತ್ತಿಪತ್ರಗಳು, ಹಾಗು ಪ್ರಕಟಣೆಯ ಮೂಲಕ ಪರಿಚಯ ಮಾಡುವುದರಿಂದ ಕುಷ್ಠರೋಗದ ಬಗ್ಗೆ ಜನರಲ್ಲಿ ಬೇರೂರಿರುವ ಭಯ, ತಪ್ಪು ತಿಳುವಳಿಕೆಗಳು ಕಡಿಮೆಯಾಗುತ್ತವೆ.

**ಆರೋಗ್ಯ ಕಾರ್ಯಕರ್ತರ ಪಾತ್ರ :** ಕುಷ್ಠರೋಗಿಗಳನ್ನು ಕಾಲಕಾಲಕ್ಕೆ ಭೆಟ್ಟಿಮಾಡಿ, ಅವರು ನಿಯಮಿತವಾಗಿ ಮಾತ್ರೆಗಳನ್ನು ತೆಗೆದುಕೊಳ್ಳುತ್ತಿದ್ದಾರೆಯೇ ಎಂಬುದರ ಬಗ್ಗೆ ರೋಗಿಗಳು ಇರುವಲ್ಲಿಗೇ ಹೋಗಿ ಮೇಲ್ವಿಚಾರಣೆ ಮಾಡಿ ಸೂಕ್ತ ಸಲಹೆ, ತಿಳುವಳಿಕೆಯನ್ನು ನೀಡಬೇಕು.

ಕುಟುಂಬದ ಇತರ ಸದಸ್ಯರನ್ನು ಮುಂಜಾಗ್ರತೆ ಕ್ರಮವಾಗಿ ಪರೀಕ್ಷೆಗೆ ಒಳಪಡಿಸಬೇಕು ರೋಗ ಸಂಪೂರ್ಣ ಗುಣವಾಗುವವರೆಗೂ ನಿಯಮಿತವಾಗಿ ಮಾತ್ರೆಗಳನ್ನು ತೆಗೆದುಕೊಳ್ಳುವಂತೆ ನೋಡಿಕೊಳ್ಳಬೇಕು. ಈ ನಿಟ್ಟಿನಲ್ಲಿ ರೋಗಿಗಳ ಸಹ

ಕಾರವೂ ಮುಖ್ಯ. ಆರೋಗ್ಯ ಕಾರ್ಯಕರ್ತರು ರೋಗಿಗಳ ಮನೆಬಾಗಿಲಿಗೆ ಬಂದಾಗ, ಅವರೊಂದಿಗೆ ಸಹಕರಿಸಿ, ಮುಕ್ತ ಮನಸ್ಸಿನಿಂದ ತಮಗಿರುವ ತೊಂದರೆಗಳನ್ನು ತಿಳಿಸಿದರೆ ಸೂಕ್ತ ಮಾರ್ಗದರ್ಶನ ಮಾಡಲು ಅನುಕೂಲವಾಗುತ್ತದೆ.

**ಕುಷ್ಠರೋಗಿಗಳ ಬಗ್ಗೆ ಅನುಕಂಪ :** ಕುಷ್ಠರೋಗ ಕೇವಲ ಭಿಕ್ಷುಕರಿಗೆ ಮಾತ್ರ ಸೀಮಿತವಾಗಿದೆ ಎಂಬ ಭಾವನೆ ಬಹುತೇಕ ಜನರಲ್ಲಿ ಬೇರೂರಿದೆ. ಆದರೆ ಈ ಭಾವನೆ ತಪ್ಪು ರೋಗಿಗಳಲ್ಲಿ ಶೇಕಡ 5 ರಿಂದ 6 ಜನ ಮಾತ್ರ ಭಿಕ್ಷುಕರು. ಇನ್ನುಳಿದ ರೋಗಿಗಳು ಸಮಾಜದಲ್ಲಿ ನಮ್ಮೆಲ್ಲರ ಮಧ್ಯೆಯೇ ಇದ್ದಾರೆ. ಕುಷ್ಠರೋಗವು ಸಹ ಇತರೆ ರೋಗಗಳಂತೆ ಬಡವ ಬಲ್ಲಿದರೆಂಬ ಮೇಲು ಕೀಳು ಎಂಬ ತಾರತಮ್ಯವಿಲ್ಲದೆ ಎಲ್ಲರಿಗೂ ಬರುತ್ತದೆ; ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಅನೇಕ ಜನ ತಮಗಿರುವ ರೋಗವನ್ನು ಗೋಪ್ಯವಾಗಿಟ್ಟುಕೊಂಡು ಸಮಾಜದಲ್ಲಿದ್ದುಕೊಂಡೇ ತಮ್ಮ ದೈನಂದಿನ ಕೆಲವು ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. ತಮಗರಿವಿಲ್ಲದೆಯೇ ಅನೇಕ ರೋಗಿಗಳು ನಮ್ಮ ಮಧ್ಯೆ ಇರಬಹುದು. ಬಹುತೇಕ ಜನರು ತಮಗೆ ರೋಗವಿದೆ ಎಂದು ಇತರರಿಗೆ ಗೊತ್ತಾದರೆ ಎಲ್ಲಿ ತಮ್ಮನ್ನು ದೂರವಿಡುತ್ತಾರೋ, ಎಂಬ ಭಯ ಆತಂಕದಿಂದ ತಮಗಿರುವ ರೋಗಕ್ಕೆ ಬೇರೊಂದು ರೂಪ ಕೊಟ್ಟು ಸಮಾಜದ ವಕ್ರದೃಷ್ಟಿಯಿಂದ ಪಾರಾಗಲು ಪ್ರಯತ್ನಿಸುತ್ತಾರೆ.

ಆದರೆ ಅನಕ್ಷರಸ್ಥರು, ಕೂಲಿಕಾರರು, ಕಡು ಬಡವರು, ಪ್ರಾರಂಭದ ಹಂತದಲ್ಲಿ ರೋಗವನ್ನು ಗುರುತಿಸಲಾಗದೆ, ಅದು ಬೆಳೆದು ತನ್ನ ಕರಾಳ ಛಾಯೆಯನ್ನು ದೇಹದ ವಿವಿಧ ಅಂಗಾಂಗಳ ಮೇಲೆ ಬೀರಿದಾಗ ಕುಷ್ಠರೋಗ ಎಂಬ ಹಣೆ ಪಟ್ಟಿಯನ್ನು ಹಚ್ಚಿಕೊಂಡು ಸಮಸ್ತರ ಅನಾದರಣೆಗೆ, ತಿರಸ್ಕಾರಕ್ಕೆ ಗುರಿಯಾಗುತ್ತಾರೆ. ಇಂಥವರು ಜೀವನ ನಿರ್ವಹಣೆಗಾಗಿ ಭಿಕ್ಷಾವೃತ್ತಿಗೆ ಮೊರೆ ಹೋಗುತ್ತಾರೆ. ಕೆಲವು ರೋಗಿಗಳು ಅಂಗವಿಕಲರಾಗಿ ಇರುವ ಉದ್ಯೋಗವನ್ನು ಮುಂದುವರಿಸಿಕೊಂಡು ಹೋಗಲಾರದೆ, ನಿರುದ್ಯೋಗಿ ನಿರ್ಗತಿಕರಾಗುತ್ತಾರೆ. ಇಂಥವರನ್ನು ಮಾನವೀಯತೆ, ಅನುಕಂಪದ ದೃಷ್ಟಿಯಿಂದ ನೋಡದೆ, ಕುಟುಂಬದ ಸದಸ್ಯರು, ಸಮಾಜ, ಅವರನ್ನು ಹೊರಗೆ ಹಾಕುತ್ತಾರೆ ಇಲ್ಲಿ ಪ್ರೀತಿ, ವಿಶ್ವಾಸ, ಸಂಬಂಧ ಎಲ್ಲವೂ ಅರ್ಥವನ್ನು ಕಳೆದುಕೊಂಡು, ಅಪರಾಧಿಗಳ ಸ್ಥಾನದಲ್ಲಿ ನಿಲ್ಲುವಂತೆ ಮಾಡುತ್ತಾರ.

**ಪುನರ್ವಸತಿ ಕೇಂದ್ರ :** ಇಂತಹ ವಿಷಮ ಪರಿಸ್ಥಿತಿಯಲ್ಲಿ ಅವರ ಬದುಕಿಗೊಂದು ಆಸರೆ ನೀಡಲು ಒಂದು ವ್ಯವಸ್ಥಿತವಾದ ಸಂಸ್ಥೆಯ ಅಗತ್ಯ ತುಂಬಾ ಇದೆ. ಇಂಥ ಕೆಲವು ಸಂಸ್ಥೆಗಳು ಕರ್ನಾಟಕದಲ್ಲಿವೆ. ಉದಾ. ಚಿತ್ರದುರ್ಗ ಜಿಲ್ಲೆಯಲ್ಲಿರುವ ಕೊಂಡಜ್ಜಿ ಗ್ರಾಮ. ಈ ಸಂಸ್ಥೆಗಳು ರೋಗಿಗಳಲ್ಲಿ ಆತ್ಮ ವಿಶ್ವಾಸವನ್ನು ಮೂಡಿಸುವ

ವರ ಜೊತೆಗೆ ಅವರವರ ದೇಹರಚನೆ, ಶಕ್ತ್ಯಾನುಸಾರ ಕರಕುಶಲ ಕಲೆಗಳಲ್ಲಿ ತರಬೇತಿ ನೀಡಿ ಅವರು ಸಮಾಜದಲ್ಲಿ ಸ್ವಾವಲಂಬಿಗಳಾಗಿ ಬದುಕಲು ಅವಕಾಶವನ್ನು ಕಲ್ಪಿಸಿ ಕೊಡುತ್ತವೆ. ಕೆಲವರಿಗೆ ಅವರವರ ಕೆಲಸಕ್ಕೆ ತಕ್ಕಂತೆ ವೇತನವನ್ನು ನೀಡಿ ಜೀವನ ಜ್ಯೋತಿ ಮತ್ತೆ ಬೆಳಗುವಂತೆ ಮಾಡುತ್ತಿದ್ದಾರೆ. ಆದರೆ ಕರ್ನಾಟಕದಲ್ಲಿರುವ ರೋಗಿಗಳೆಲ್ಲರಿಗೂ ನೆರವನ್ನು ಒದಗಿಸಲು ಕಷ್ಟ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ದಿನೇದಿನೇ ಬೆಳೆಯುತ್ತಿರುವ ಈ ಸಮಸ್ಯೆಯನ್ನು ಪರಿಹರಿಸಲು ಸರ್ಕಾರದ ಜೊತೆಗೆ ಸಂಘ ಸಂಸ್ಥೆಗಳು ಮುಂದಾಗಬೇಕು. ಕುಷ್ಟರೋಗಿಗಳನ್ನು ಇತರೆ ರೋಗಿಗಳಂತೆ ಮಾನವೀಯ ದೃಷ್ಟಿಯಿಂದ ನೋಡಿ ಅವರು ಸಮಾಜದಲ್ಲಿ ಬದುಕಲು ಅವಕಾಶವನ್ನು ಕಲ್ಪಿಸಿಕೊಡಬೇಕಾದದ್ದು ಎಲ್ಲರ ಆದ್ಯ ಕರ್ತವ್ಯ. ಕುಷ್ಠರೋಗವು ಸಹ ಇತರೆ ರೋಗಗಳಂತೆ ವಾಸಿ ಮಾಡಬಹುದಾದ ಒಂದು ಸಾಮಾನ್ಯ ರೋಗ ಎಂಬುದನ್ನು ಮನಗಾಣಬೇಕು.

---

ಮರ ಮರ ಮಥನಿಸಿ, ಕಿಚ್ಚು ಹುಟ್ಟಿ, ಸತ್ತಣ ತರುವ ತಾದಿಗಳ ಸುಡಲಾಯಿತ್ತು. ಆತ್ಮವಾತ್ಮ ಮಥನಿಸಿ, ಅನುಭಾವ ಹುಟ್ಟಿ, ತನುಗುಣಾದಿಗಳ ಸುಡಲಾಯಿತ್ತು. ಇದು ಕಾರಣ ನಿಮ್ಮ ಮಹಾನುಭಾವಿಗಳ ಅನುಭಾವವ ತೋರಿ, ಎನ್ನೊಡಲನುಳುಹಿಕೊಳ್ಳ ಚನ್ನಮಲ್ಲಿಕಾರ್ಜುನಾ

ಅಯ್ಯಾ, ನಿಮ್ಮ ಶರಣರ ಕೂಡಿದ ಸುಖವನುಪಮೆಗೆ ತರಬಾರದಯ್ಯ! ಅಯ್ಯ ನಿಮ್ಮ ಮಹಂತರ ಕೂಡಿಯಗಲುವ ದಾವತಿಯಿಂದ ಸಾವುದೇ ಕರಲೇಸು ಕಂಡಯ್ಯ. ಚನ್ನಮಲ್ಲಿಕಾರ್ಜುನಯ್ಯ, ನಿಮ್ಮನರುಹಿದ ಮಹಿಮರನಗಲಿ ಅನುನಿಲಲಾರೆನಯ್ಯಾ.

ಅಕ್ಕಮಹಾದೇವಿ

# ' ಹಳೆಯ ವಿದ್ಯಾರ್ಥಿ ಸಂಘದ '

## ಆಜೀವ ಸದಸ್ಯತ್ವ ಪಡೆದಿರುವವರು

229 ಶ್ರೀ ಎಸ್. ಆರ್. ರೇಣುಕಾರಾಧ್ಯ, ನಂ 1912, 3ನೇ 'ಎ' ಮುಖ್ಯ ರಸ್ತೆ, ಆರ್. ಪಿ. ಸಿ. ಬಡಾವಣೆ, ವಿಜಯ ನಗರ, ಬೆಂಗಳೂರು-560040

230 ಶ್ರೀ ರಾಜಶೇಖರಯ್ಯ, ಸಿ. ಎ. ನಂ 2/3 ಎರಡನೇ ಹಂತ, ಬಿ. ವಿ. ಕೆ. ಅಯ್ಯಂಗಾರ್ ರಸ್ತೆ, ಸಿದ್ಧಗಂಗಾ ಭವನ, ಬೆಂಗಳೂರು-560053

231 ಶ್ರೀ ಎಸ್. ಪರಮೇಶ್ವರಯ್ಯ ಉಪಾಧ್ಯಾಯರು, ಕರಿದೇವರ ಮಠ ತುಮಕೂರು ಜಿಲ್ಲೆ-572214

232 ಶ್ರೀ ಸಿ. ನರಸಿಂಹಯ್ಯ, ನಂ 318, ರಾಮಕೃಷ್ಣ ಮಠದ ರಸ್ತೆ, ಪೋಲೀಸ್ ಕ್ವಾಟ್ರಸ್, ಅಲಸೂರು ಬೆಂಗಳೂರು-560008.

233 ಶ್ರೀ ಕೆ. ಬಿ ಗಂಗಣ್ಣ, ಕನ್ನಡ ಪಂಡಿತ್ ಸರ್ಕಾರಿ ಕಿರಿಯ ಕಾಲೇಜು, ಗೋಡೆಕೆರೆ, ತುಮಕೂರು ಜಿಲ್ಲೆ.

234 ಶ್ರೀ ವಿ ಎಸ್ ಶಿವಣ್ಣ, ಸಹ ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು, ಸಿದ್ಧಗಂಗಾ ಮಠ.

235 ಶ್ರೀ ಹೆಚ್. ಗುರಪ್ಪರೆಡ್ಡಿ, ನಂ 1 ತಿಮ್ಮರೆಡ್ಡಿ ರಸ್ತೆ, ಇಂದಿರಾನಗರ ಅಂಚೆ, ಬೆಂಗಳೂರು-560038.

236 ಶ್ರೀ ಜಿ. ಬಸವರಾಜು, ತಲಕಾಡು ಸುಬ್ಬರಾವ್ ಬೀದಿ, ನೆಲಮಂಗಲ, ಬೆಂಗಳೂರು ಜಿಲ್ಲೆ-562123.

237 ಶ್ರೀ ಎ. ಚಂದ್ರಪ್ಪ, ಜೂನಿಯರ್ ಇಂಜನಿಯರ್, ಮುರುಡ್ ಅಂಚೆ, ಲತೂರು ಜಿಲ್ಲೆ, ಮಹರಾಷ್ಟ್ರ ರಾಜ್ಯ-543510.

238 ಶ್ರೀ ಹೆಚ್. ಶಿವರುದ್ರಯ್ಯ, ಉಪಾಧ್ಯಾಯರು, ಹೊನ್ನೇನಹಳ್ಳಿ, ಡಾಬಸಪೇಟೆ ಅಂಚೆ, ನೆಲಮಂಗಲ ತಾ.

239 ಶ್ರೀ ಎನ್. ಕೃಷ್ಣಪ್ಪ, ಮೆಟಲರ್ಜಿಕಲ್ ಲ್ಯಾಬ್, ವಿ. ಐ. ಎಸ್. ಎಲ್. ಭದ್ರಾವತಿ.

240 ಶ್ರೀ ಹೆಚ್. ಆರ್. ಸಿದ್ದೇಗೌಡ, ಹಾಲನೂರು ಮತ್ತು ಅಂಚೆ ತುಮಕೂರು ತಾ||ಮತ್ತು ಜಿಲ್ಲೆ.

(ಮುಂದುವರೆಯುತ್ತದೆ.)

# ಕಾನಾಮಡುವಿನ ಶ್ರೀ ಶ್ರೀ ಶರಣಾರ್ಯ ಸ್ವಾಮಿಗಳು

—ಬಿ. ನಂಜುಂಡಪ್ಪ.

ಕನ್ನಡನಾಡು ಹಲವು ಶತಮಾನಗಳಿಂದ ಪುಣ್ಯಕ್ಷೇತ್ರಗಳಿಗೆ ನೆಲೆಮನೆಯೆನಿಸಿದೆ. ನಾಡಿನ ಮಧ್ಯೆಯಿರುವ ತುಮಕೂರು ಜಿಲ್ಲೆಯ ಎಡೆಯೂರು, ಸಿದ್ಧಗಂಗೆ, ಗುಬ್ಬಿ, ಸಿದ್ಧರಬೆಟ್ಟ, ಸಮೀಪದ ಶಿವಗಂಗೆ ಮುಂತಾದ ಕ್ಷೇತ್ರಗಳು ಮಹಾ ಶಿವಯೋಗಿಗಳ ತಪೋಭೂಮಿಯಾಗಿವೆ. ಆ ಕ್ಷೇತ್ರಗಳು ತರುಲತೆ ಗುಲ್ಮಗಳುಳ್ಳ ನೈಸರ್ಗಿಕ ಸಂಪತ್ತಿನಿಂದ ಶೋಭಿಸುತ್ತಿವೆ.

ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ರತ್ನಗಿರಿ ಪ್ರದೇಶದಲ್ಲಿ ಅಗಳಿಪುರಗ್ರಾಮವಿದೆ. ಕಳೆದ ಹತ್ತೊಂಭತ್ತನೆಯ ಶತಮಾನದ ಅಂತ್ಯದಲ್ಲಿ ಆ ಗ್ರಾಮದಲ್ಲಿ ಶ್ರೀ ಗುರುಲಿಂಗ ಜಂಗಮ ಪ್ರೇಮಿಗಳೂ ಸಕಲ ಸದ್ಗುಣ ಸಂಪನ್ನರೂ ಆದ ಬಸವಪ್ಪ–ಪುಟ್ಟವ್ವೆ ಎಂಬ ದಂಪತಿಗಳಿದ್ದರು. ಹಲವು ವರ್ಷ ಪುತ್ರ ಸಂತಾನವಿಲ್ಲದ ಕೊರಗು ಆ ದಂಪತಿಗಳ ಮನಸ್ಸಿನಲ್ಲಿ ಮನೆಮಾಡಿತ್ತು. ಅವರ ಗುರು ಸೇವಾ ದಾಸೋಹದ ಫಲವಾಗಿ, ಶುಭಮುಹೂರ್ತದಲ್ಲಿ ಸತ್ಪುತ್ರನೊಬ್ಬನು ಜನಿಸಿದನು. ಶ್ರೀ ಗುರುವಿನಿಂದ ಲಿಂಗಧಾರಣೆಯಾಯಿತು. ಚನ್ನಬಸವಣ್ಣನೆಂಬ ನಾಮಕರಣವಾಯಿತು. ಬಾಲಕ ಬೆಳೆದಂತೆ ಉತ್ತಮ ವಿದ್ಯಾಭ್ಯಾಸ, ಧಾರ್ಮಿಕ ಶಿಕ್ಷಣ ದೊರೆಯಿತು. ಎಂಟನೆಯ ವರ್ಷದಲ್ಲಿ ವಿದ್ಯುಕ್ತವಾದ ಶಿವದೀಕ್ಷಾ ಸಂಸ್ಕಾರವೂ ಜರುಗಿತು. ಭಕ್ತಿ ಜ್ಞಾನ ವೈರಾಗ್ಯಗಳ ಸಹಜ ಜ್ಞಾನದೊಂದಿಗೆ ಚನ್ನಬಸವಣ್ಣನಲ್ಲಿ ಶಿವತೇಜಸ್ಸು ಬೆಳೆಯತೊಡಗಿತು.

ಬಸವಪ್ಪ ದಂಪತಿಗಳಿಗೆ ಕರಿಬಸವಣ್ಣ, ಗುಬ್ಬಣ್ಣ ಎಂಬ ಇನ್ನಿಬ್ಬರು ಪುತ್ರರೂ ಗುರುಬಸಮ್ಮ, ಗುರುಶಾಂತಮ್ಮ ಎಂಬ ಇಬ್ಬರು ಪುತ್ರಿಯರೂ ಜನಿಸಿದರು. ಸತ್ಯಶುದ್ಧ ವ್ಯವಸಾಯವೇ ಆ ಕುಟುಂಬದ ಕಾಯಕ. ಗುರು ಲಿಂಗ ಜಂಗಮಾರಾಧನೆ, ಶಿವಪುರಾಣ ಶ್ರವಣ, ಶಿವಪೂಜೆ, ಶಿವಭಜನೆ, ಶಿವಾನುಭವ ಪ್ರಸಂಗಗಳು ಸಂತತವಾಗಿ ನಡೆಸಲ್ಪಡುತ್ತಿದ್ದವು.

ಬಾಲ್ಯ ಕಳೆದು ಹರೆಯವು ಕಾಲಿಡುತ್ತಾ ಚನ್ನಬಸವಣ್ಣನು ಗುರು ಕರುಣೆಯಿಂದ ಲಭ್ಯವಾದ ಶಿವಯೋಗ ಶಿವಾನುಭವ ಸುಖದಲ್ಲಿ ಲೋಲುಪ್ತನಾದನು.

ಇಂದ್ರಿಯಾದಿ ಕರಣಗಳು ಶಿವಸುಖದಲ್ಲಿ ತನ್ಮಯಗೊಂಡವು. ಏಕಾಂತವಾಸದಲ್ಲಿ ಶಿವಚಿಂತನೆಯಲ್ಲಿ ಮಗ್ನನಾಗಿರುತ್ತಿದ್ದನು.

**ಶಿವಕ್ಷೇತ್ರ ದರ್ಶನ:**– ಚನ್ನಬಸವಣ್ಣನಿಗೆ ಶಿವಯೋಗಿಗಳ ಮತ್ತು ಶಿವಾನುಭಾವಿಗಳ ದರ್ಶನಾಕಾಂಕ್ಷೆ, ಶಿವಗೋಷ್ಠಿಗಳ ಹಂಬಲ ದಿನೇ ದಿನೇ ಹೆಚ್ಚುತ್ತಾ ಬಂದಿತು ಶಿವಕ್ಷೇತ್ರಗಳನ್ನು ನೋಡಬೇಕೆಂಬ ಇಚ್ಛೆ ಪ್ರಬಲವಾಯಿತು ಆದರೆ, ತಂದೆ ತಾಯಿಗಳು ಮಗನ ಅಗಲಿಕೆ ಸಹಿಸಲು ಸಿದ್ಧವಿರಲಿಲ್ಲ ಆದರೂ ಮಗನ ಮನಸ್ಸು ಸ್ಥಿರವಾಗಿದ್ದರಿಂದ, ಆತನ ಮನಸಂಕಲ್ಪಕ್ಕೆ ಅವರು ಅಡ್ಡಿ ತರಲಿಲ್ಲ.

ಮಹಾಮಹಿಮರಾದ ತೋಂಟದ ಸಿದ್ಧಲಿಂಗೇಶ್ವರ ಗುರು ಪರಂಪರೆಯ ಆದ್ಯಗುರುಗಳಾದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗಳ ತಪೋಭೂಮಿಯಾದ ಸಿದ್ಧಗಿರಿ (ಸಿದ್ಧರಬೆಟ್ಟ) ಕ್ಷೇತ್ರವನ್ನು ಚನ್ನಬಸವಣ್ಣನು ಮೊದಲು ಸಂದರ್ಶಿಸಿದನು. ಆ ಕ್ಷೇತ್ರ ಗಿರಿ ಗುಹಾಂತರಗಳಿಂದಲೂ ನಿರ್ಝರ ತರುಲತಾಟಗಳಿಂದಲೂ ನಯನ ಮನೋಹರವಾಗಿ ಪ್ರಶಾಂತವಾಗಿತ್ತು. ಅಲ್ಲಿಯ ಗುಹೆಯೊಂದರಲ್ಲಿದ್ದ ಬೇವಿನ ಮಠದ ಸ್ವಾಮಿಗಳೆಂಬ ಶಿವಯೋಗಿಗಳ ದರ್ಶನವಾಯಿತು ಚನ್ನಬಸವಣ್ಣನು ಆ ಸ್ವಾಮಿಗಳೊಡನೆ ಕೆಲದಿನವಿದ್ದು, ಅವರೊಡನೆ ಹೊರಟು ಗುಬ್ಬಿ, ಸಿದ್ಧಗಂಗೆ, ಶಿವಗಂಗೆ ಮುಂತಾದ ಶಿವಕ್ಷೇತ್ರಗಳ ದರ್ಶನಮಾಡಿ, ಮೈಸೂರು ನಗರವನ್ನು ಪ್ರವೇಶಿಸಿದನು.

ಬೇವಿನಮಠದ ಸ್ವಾಮಿಗಳೊಡನೆ ಚನ್ನಬಸವಣ್ಣನು ಮೈಸೂರರಸರಾದ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಸಂದರ್ಶಿಸಿದನು. ಅರಸರ ಇಚ್ಛೆಯಂತೆ ಕೆಲವು ದಿನ ಆ ನಗರದ ಜಪದಕಟ್ಟೆಮಠದಲ್ಲಿ ಬಿಡಾರಬಿಡಲಾಯಿತು. ಆ ಗುರು ಶಿಷ್ಯರ ಆದರ್ಶವನ್ನು ಮಹಾರಾಜರು ಗೌರವಾದಾರಗಳಿಂದ ಶ್ಲಾಘಿಸಿದರು.

ಕೆಲವು ದಿನಗಳನಂತರ ಬೇವಿನಮಠದ ಸ್ವಾಮಿಗಳು ಉತ್ತರ ಕರ್ನಾಟಕದ ಕಡೆ ಹೊರಟರು, ಚನ್ನಬಸವಣ್ಣನು ಮಧುಗಿರಿಗೆ ಬಂದು, ಅಲ್ಲಿನ ಮಠದಲ್ಲಿದ್ದ ಶ್ರೀ ಗುರು ನಂಜಾರ್ಯರನ್ನು ಸಂದರ್ಶಿಸಿ, ಅವರ ಸೇವೆಯಲ್ಲಿ ನಿರತನಾದನು. ಅಲ್ಲಿ ನಡೆಯುತ್ತಿದ್ದ ಶಿವಾನುಭವ ಪ್ರವಚನದಲ್ಲಿ ಶ್ರದ್ಧೆಯಿಂದ ಭಾಗವಹಿಸುತ್ತಿದ್ದನು. ಆತನ ಸದ್ಭಕ್ತಿ, ಸದಾಚರಣೆ, ಶಿವಯೋಗ ನಿಷ್ಠೆಗಿಂತ ಗುರು ಮತ್ತು ದರ್ಶನಾರ್ಥಿಗಳ ಸೇವೆಯಲ್ಲಿ ಅವರಿಗಿದ್ದ ಉತ್ಸಾಹವನ್ನು ಕಂಡು ಭಕ್ತವೃಂದವು ಆತನನ್ನು ಶರಣನೆಂದೇ ಕರೆಯುತ್ತಿದ್ದರು.

**ವೀರಶೈವ ದೀಕ್ಷೆ:**– ಗುರುನಂಜಾರ್ಯರ ಪುರಾಣ ಪ್ರವಚನ ಮಠದಲ್ಲಿ ಯಥಾವತ್ತಾಗಿ ನಡೆಯುತ್ತಿತ್ತು ಪ್ರವಚನವನ್ನು ಆದ್ಯಂತವಾಗಿ ಕೇಳುತ್ತಿದ್ದ ಪುಟ್ಟಮ್ಮ

ಮುರಾರಮ್ಮ ಎಂಬ ಇಬ್ಬರು ವೈಶ್ಯ ಮಹಿಳೆಯರು ಶಿವಧರ್ಮದಲ್ಲಿ ಪ್ರಭಾವಿತರಾಗಿ, ವೀರಶೈವ ದೀಕ್ಷೆಯನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡರು. ಒಪ್ಪಿಗೆ ಪಡೆದು, ಆ ಇಬ್ಬರು ಮಹಿಳೆಯರಿಗೂ ವೀರಶೈವ ದೀಕ್ಷೆಯನ್ನು ಅನುಗ್ರಹಿಸಿದರು. ಆದರೆ ಪ್ರಭಯ್ಯನೆಂಬುವರು ಆ ಶಿವದೀಕ್ಷಾಕಾರ್ಯವನ್ನು ಪ್ರತಿಭಟಿಸಿದರು. ಶ್ರೀ ಗುರುಸಿದ್ಧದೇಶಿಕೇಂದ್ರರು ಆಕ್ಷೇಪಣೆಯನ್ನು ನಿವಾರಿಸಿ ಪ್ರಭಯ್ಯನವರಿಗೆ ಸೂಕ್ತ ತಿಳುವಳಿಕೆ ನೀಡಿದರು. ಶಿವಧರ್ಮ ಪ್ರಸಾರ ಕಾರ್ಯದಲ್ಲಿ ನಿರತರಾಗಿದ್ದ ಶರಣಾರ್ಯರನ್ನು ಜಗದ್ಗುರುಗಳು ಪ್ರಶಂಸಿದರು.

ಶ್ರೀ ನಿಡುಮಾಮಿಡಿಗುರು ದರ್ಶನ:– ಉಜ್ಜಯಿನಿ ಜಗದ್ಗುರುಗಳ ಕೃಪಾಶೀರ್ವಾದವನ್ನು ಪಡೆದ ಶರಣಾರ್ಯರು ತಮ್ಮ ಮನೆ ಗುರುಗಳಾದ ಶ್ರೀ ನಿಡುಮಾಮಿಡಿ ಕರಿಬಸವ ರಾಜೇಂದ್ರ ಸ್ವಾಮಿಗಳ ದರ್ಶನಕ್ಕಾಗಿ ಪ್ರಯಾಣ ಮಾಡಿದರು. ಮಧುಗಿರಿ ಮುಂತಾದ ಶಿವಕ್ಷೇತ್ರಗಳನ್ನು ನೋಡುತ್ತಾ ಮುಂದೆ ನಿಡುಮಾಮಿಡಿ ಕ್ಷೇತ್ರವನ್ನು ತಲುಪಿದರು. ಮಠವನ್ನು ಪ್ರವೇಶಿಸಿ, ಶ್ರೀ ಕರಿಬಸವಸ್ವಾಮಿಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ಸ್ವಾಮಿಗಳ ಅನುಜ್ಞೆಯಂತೆ, ಶರಣಾರ್ಯರು ಮೂರುವರ್ಷಕಾಲ ಅಲ್ಲಿಯೇ ನಿಂತು, ದಿನಂಪ್ರತಿ ಗುರುಲಿಂಗ ಜಂಗಮಸೇವೆಯಲ್ಲಿ ನಿರತನಾಗಿ, ದಾಸೋಹವನ್ನು ಶ್ರದ್ಧಾಭಕ್ತಿಯಿಂದ ನಡೆಸುತ್ತಿದ್ದರು. ಶ್ರೀಗಳು ಆತನ ಭಕ್ತಿದಾಸೋಹ ಸೇವಾನಿಷ್ಠೆಯನ್ನು ಮೆಚ್ಚಿದರು.

ರತ್ನಗಿರಿಯಲ್ಲಿ ಗುರುಶಿವೇಂದ್ರರ ದರ್ಶನ:– ನಿಡುಮಾಮಿಡಿ ಗುರುಗಳ ಅಪ್ಪಣೆ ಪಡೆದು, ಮುಂದೆ ಮಡಕಶಿರಾ ಮಾರ್ಗವಾಗಿ ರತ್ನಗಿರಿ ಗ್ರಾಮವನ್ನು ತಲುಪಿ, ವೀರಶೈವಾಚಾರ ಸಂಪನ್ನನಾದ ಕಾಶಿ ಸಿದ್ದಯ್ಯ ಎಂಬುವರ ಮನೆಯಲ್ಲಿ ನಿಂತು, ದಾಸೋಹ ಕಾಯಕವನ್ನು ಕೈಗೊಂಡು, ಶಿವಾನುಭವ ಪ್ರಸಂಗದಲ್ಲಿ ನಿರತರಾದರು. ಆ ಗ್ರಾಮದ ಚಿಕ್ಕವೀರಪ್ಪ ಎಂಬ ಗುರುಭಕ್ತರ ಮನೆಯಲ್ಲಿ ಶಿವೇಂದ್ರದೇವರೆಂಬ ಶಿವಯೋಗಿಗಳು ನೆಲಸಿರುವಂತೆ ವಿಷಯವನ್ನು ತಿಳಿದು ಶರಣಾರ್ಯರು ಆ ಗೃಹಕ್ಕೆ ಹೋಗಿ ಆ ಶಿವಯೋಗಿಗಳಿಗೆ ಸಾಷ್ಟಾಂಗವೆರಗಿದರು. ಶರಣಾರ್ಯರ ಕಂಕುವರ್ಣಾತಿ ಸದ್ಗುಣಗಳನ್ನು ಕಂಡು, ಅವರನ್ನು ಪ್ರೀತಿಯಿಂದ ಶಿಷ್ಯರನ್ನಾಗಿ ಪರಿಗ್ರಹಿಸಿದರು. ಶರಣಾರ್ಯರು ಶ್ರದ್ಧೆಯಿಂದ ಗುರುಸೇವೆ ಮಾಡುತ್ತಾ, ಶಿವಭಕ್ತರ ಮನೆಗಳಲ್ಲಿ ಭಕ್ತಿಭಿಕ್ಷೆಯನ್ನೆತ್ತಿ ತಂದು ದಾಸೋಹಕ್ಕಾಗಿ ಗುರುವಿಗೆ ನೆರವಾದರು.

ಗುರುಕರುಣೆ, ಅನುಗ್ರಹ ದೀಕ್ಷೆ, ತತ್ತ್ವೋಪದೇಶ:— ಶರಣಾರ್ಯರ ಸೇವೆ, ದಾಸೋಹ, ಪೂಜಾನಿಷ್ಠೆ, ಸದ್ಭಕ್ತಿಗೆ ಮೆಚ್ಚಿದ ಶಿವೇಂದ್ರ ಶಿವಯೋಗಿಗಳು ಅವರಿಗೆ ವಿದ್ಯುಕ್ತವಾಗಿ ಶುಭಮುಹೂರ್ತದಲ್ಲಿ ಅನುಗ್ರಹ ದೀಕ್ಷೆಯನ್ನು ದಯಪಾಲಿಸಿದರು. ದೀಕ್ಷಾಂಗವಾದ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ,

ಪಾದೋದಕ, ಪ್ರಸಾದವೆಂಬ ಅಷ್ಟಾವರಣ, ಲಿಂಗಾಚಾರ, ಸದಾಚಾರ ಶಿವಾಚಾರ, ಗಣಾಚಾರ ಭೃತ್ಯಾಚಾರವೆಂಬ ಪಂಚಾಚಾರ ಮತ್ತು ಭಕ್ತ, ಮಹೇಶ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳ ರಹಸ್ಯ ವಿಚಾರಗಳನ್ನು ಕುರಿತು ಜ್ಞಾನೋಪದೇಶ ಮಾಡಿದರು. ಗುರೂಕ್ತವಾದ ಜ್ಞಾನ ಕ್ರಿಯಾಚರಣೆಗಳಿಂದ ಶರಣಾರ್ಯರಲ್ಲಿ ದಿವ್ಯ ಶಿವತೇಜಸ್ಸು ಪ್ರಜ್ವಲಿಸತೊಡಗಿತು.

**ಸಾಯ್ಕನಹಟ್ಟಿ, ಚಿತ್ರದುರ್ಗಗಳಲ್ಲಿ ಗುರುದರ್ಶನ:**–ಅಲ್ಲಿಂದ ಮುಂದೆ ಶರಣಾರ್ಯರು ಸಾಯ್ಕನ ಹಟ್ಟಿಗೆ ಪ್ರಯಾಣಮಾಡಿ, ಆ ಕ್ಷೇತ್ರದ ಅಧಿಪತಿಯಾದ ತಿಪ್ಪೇರುದ್ರಸ್ವಾಮಿಯ ದರ್ಶನಮಾಡಿ, ಅಲ್ಲಿಂದ ಮುಂದೆ ಸುಪ್ರಸಿದ್ಧವಾದ ಚಿತ್ರದುರ್ಗಕ್ಕೆ ಆಗಮಿಸಿದರು. ಅಲ್ಲಿಯ ಜಗದ್ಗುರು ಮುರುಘರಾಜೇಂದ್ರ ಸ್ವಾಮಿಗಳ ಮಠಕ್ಕೆ ಬಂದು, ಮಹಾತಪಸ್ವಿಗಳೂ ಶಿವಯೋಗ ಸಿದ್ಧರೂ ಆದ ಜಗದ್ಗುರು ಶಾಂತವೀರಸ್ವಾಮಿಗಳನ್ನು ಸಂದರ್ಶಿಸಿ, ಸಾಷ್ಟಾಂಗ ಪ್ರಣಾಮ ಮಾಡಿದರು, ಜಗದ್ಗುರುಗಳು ಶರಣಾರ್ಯರ ಸದ್ಗುಣ ಶಿವಯೋಗ ತೇಜಸ್ಸನ್ನು ನೋಡಿ ಆಶ್ರಯವಿತ್ತರು.

**ತುಂಬೆಹೂವಿನ ಪವಾಡ:**--ಜಗದ್ಗುರು ಶಾಂತವೀರಸ್ವಾಮಿಗಳ ಪೂಜಾ ಕೈಂಕರ್ಯವನ್ನು ಬಹಳ ಶ್ರದ್ಧಾಭಕ್ತಿಯಿಂದ ನಡೆಸುತ್ತಿದ್ದರು ನಿತ್ಯವೂ ಶಿವಪೂಜೆಗೆ ಸಾಕಷ್ಟು ತುಂಬೆಹೂವನ್ನು ಒದಗಿಸುತ್ತಿದ್ದರು. ಶಿವಪೂಜೆಯ ಮರಿ ಸ್ವಲ್ಪ ಸಮಯದಲ್ಲಿ ಇಷ್ಟು ತುಂಬೆಹೂವನ್ನು ಹೇಗೆ ಸಂಗ್ರಹಿಸುವನೆಂಬುದನ್ನು ಪರೀಕ್ಷಿಸುವ ಸಲುವಾಗಿ ಜಗದ್ಗುರುಗಳು ಮರೆಯಲ್ಲಿ ನಿಂತು ನೋಡುತ್ತಿದ್ದರು. ತೇಜಸ್ವಿಗಳಾದ ಬಹು ಮಂದಿ ಕಷಾಯಾಂಬರಧಾರಿಗಳಿಂದ ಅಪರಿಚಿತ ಗಣಂಗಳು ತುಂಬೆ ಹೂ ಬಿಡಿಸಿ ಶರಣಾರ್ಯರಿಗೆ ಕೊಟ್ಟು ಅದೃಶ್ಯರಾದುದು ಗೋಚರವಾಯಿತು. ಅಂದಿನಿಂದ ಶರಣಾರ್ಯರು ಮಹಾಪುರುಷರುಷರೆಂಬ ಭಾವನೆ ಜಗದ್ಗುರುಗಳಲ್ಲುಂಟಾಯಿತು. ಇನ್ನು ಮುಂದೆ ಅವರ ಸೇವೆಯನ್ನು ಕೈಗೊಳ್ಳುವುದನ್ನು ನಿಲ್ಲಿಸಿ, ಶಿವಧರ್ಮಪ್ರಚಾರಕ್ಕಾಗಿ ಹೊರಡುವಂತೆ ಅಪ್ಪಣೆಯಿತ್ತು, ಶರಣಾರ್ಯರಿಗೆ ರುದ್ರಾಕ್ಷಿಕಿರೀಟವನ್ನು, ಕಾಷಾಯಾಂಬರ, ಭಿಕ್ಷಾಪಾತ್ರೆ, ಭಸ್ಮಪುಟಕೆ, ಚಿತ್ರಗಳನ್ನೂ ಕೊಟ್ಟು ಆಶೀರ್ವದಿಸಿ ಕಳುಹಿಸಿದರು.

ಶರಣಾರ್ಯರು ಮುಂದೆ ಕಳುಕು ಎಂಬ ಗ್ರಾಮಕ್ಕೆ ಹೊರಟು, ಅಲ್ಲಿ ಕಲ್ಯಾಣಪ್ಪನೆಂಬ ಸದ್ಭಕ್ತನ ಮನೆಯಲ್ಲಿದ್ದು ದಾಸೋಹಸೇವೆಯನ್ನು ನಡೆಸಿದರು. ಕೆಲವು ದಿನಗಳ ನಂತರ ಜಗಳೂರಿಗೆ ಬಂದು, ದೇವರಮನೆಯ ಚೆನ್ನವೀರಪ್ಪನವರ ಗೃಹದಲ್ಲಿ ನಿಂತರು. ಅವರ ತೋಟದಲ್ಲಿ ಜಂಗಮಾರಾಧನೆ ನಡೆಯಿತು, ಮುಂದೆ ನಡೆದು ಉದ್ದಘಟ್ಟ, ಮುಂತಾದ ಹಳ್ಳಿಗಳಿಗೆ ಆಗಮಿಸಿ ದಾಸೋಹ ನಡೆಸಿದರು.

(ಮುಂದುವರಿಯುತ್ತದೆ.)

# ಜೀವನ

—ಇಂದುಮತಿ ಹಿರೇಮಠ
533, "ಶಿವಕೃಪ" 7ನೇ ಬ್ಲಾಕ್, ಜಯನಗರ ವೆಸ್ಟ್ ಕನಕಪುರ ರಸ್ತೆ, ಬೆಂಗಳೂರು.

ನನಗ್ಯಾಕಪ್ಪಾ ಮನುಷ್ಯ ಜನ್ಮದ ತಾಪತ್ರಯ ಅನ್ನಿಸುತ್ತೆ ಅವರ ಬಾಷೆ ಬರದಿದ್ದರೆ ಚಿಂತೆಯೇ ಇರಲಿಲ್ಲ. ನನ್ನ ಎಲ್ಲ ಬಂಧುಗಳಿಗಿಲ್ಲದ ಈ ಜ್ಞಾನ ವರವಾಗಿದೆ. ಶಾಪವಾಗಿದೆ. ನಾನು ಒಂದು ದಿನ ನನ್ನ ಪ್ರೇಯಸಿಯೊಡನೆ ಆಟವಾಡುತ್ತಿದ್ದಾಗ, ಆಕೆ ಆಕಸ್ಮಿಕವಾಗಿ ಕಾಲು ಜಾರಿ ಹಾಲಿನ ಪಾತ್ರೆಯಲ್ಲಿ ಬಿದ್ದುಬಿಟ್ಟಳು. ಹಾಲು ತುಂಬ ಬಿಸಿಯಾಗಿತ್ತು, ಆಕೆಯ ಒದ್ದಾಟ ನೋಡಲಾರೆ, ಆದರೆ ಏನು ಮಾಡಲಿ! ನನ್ನಿಂದ ಏನು ಸಾಧ್ಯವಾಗಲಿಲ್ಲ, ಮನೆಯಾತನಿಗೆ ಎರಡೇ ಮಕ್ಕಳು ಅವು ಆಗತಾನೆ ಸ್ಕೂಲಿನಿಂದ ಬಂದವು, ಆ ತಾಯಿ ಎಲ್ಲೋ ಹೋರಟು ನಿಂತಿದ್ದಳು ಅವಸರದಲ್ಲಿ ಮಕ್ಕಳಿಗೆ ಹಾಲು ಬಗ್ಗಿಸಿ ಕೊಟ್ಟಳು. ಷನಗೊ! ಮನುಷ್ಯ ಭಾಷೆ ತಿಳಿಯುತ್ತದೆಯೇ ಹೊರತು ಮಾತನಾಡಲು ಬಾರದು. ಆದರಲ್ಲಿ ನನ್ನ ಪ್ರೇಯಸಿ ಬಿದ್ದು ಸತ್ತಿದ್ದಾಳೆ ಅಂತಾ ಹೇಳಬೇಕೆಂದು ಓಡಿಬಂದೆ. ಆದರೂ, ಹೇಗೆ ಹೇಳಬೇಕು, ನನ್ನನ್ನು ನೋಡುತ್ತಲೇ ಓಡಿಸಿ ಬಿಟ್ಟರು. ಥೂ—ಪೀಡೆಗಳು ಎಲ್ಲಿಂದ ಸೇರಿಕೊಳ್ತಿವಿಯೋ ಎಂದು ಬೈದೂ ಬಿಟ್ಟರು. ನಂತರ ಸಂಕಟ ಯಾರ ಮುಂದೆ ಹೇಳಲಿ, ಆ ಮಕ್ಕಳು ಅವಸರದಿಂದ ಹಾಲು ಕುಡಿದು ಆಡಲು ಹೋದವು. ಇನ್ನೇನು ಅವರಮ್ಮ ಬೀಗ ಜಡಿದು, ಹೊರಗೆ ಹೋಗಬೇಕು. ಯಾರೋ ಮಕ್ಕಳನ್ನು ಎತ್ತಿಕೊಂಡು ಬಂದು ಹೇಳುತ್ತಿದ್ದರು ಮಕ್ಕಳು ವಾಂತಿ ಮಾಡಿಕೊಂಡು ಬಿದ್ದು ಬಿಟ್ಟವು, ಹೊಟ್ಟೆಯಲ್ಲಿ ಸಂಕಟವಂತೆ ಗೋಳಾಡುತ್ತಿದ್ದರು, ಎನ್ನುತ್ತಿದ್ದರು ನನಗೆ ಈ ಮಾತು ಕೇಳಿಸಿತು ಹೊರಗೆ ಬಂದೆ, ತಾಯಿ ಗಾಬರಿಯಿಂದ ಅಳುತ್ತಿದ್ದಾಳೆ, ಜನ ಕೂಡುತ್ತಿದ್ದಾರೆ, ಯಾರೋ ಡಾಕ್ಟ್ರನ್ನು ಕರೆದುಕೊಂಡು ಬಂದರು. ಡಾಕ್ಟರು. ಎಲ್ಲ ಕೇಳಿ, ಮಕ್ಕಳಿಗೆ ಆಹಾರ ಏನು ಕೊಟ್ಟಿರಿ ಅಂತಾ ಕೇಳಿದರು. ಬರಿ ಬಿಸ್ಕೇಟು ಹಾಲು ಡಾಕ್ಟ್ರೆ, ನನ್ನ ಮಕ್ಕಳನ್ನ ಉಳಿಸಿಕೊಡಿ ಅಂತಾ ಗೋಳಾಡಿದರು. ಇದು ವಿಷಯುಕ್ತ ಆಹಾರದ ಪ್ರಭಾವ ಹಾಲಿನಲ್ಲಿ ಏನಾದರೂ ಬಿದ್ದಿದೆಯೇ ನೋಡಿ ಅಂದರು. ಅಷ್ಟರಲ್ಲಿ ಯಾರೋ ಒಳಗಡೆ ಹೋಗಿ ಪಾತ್ರೆಯನ್ನು ಬಗ್ಗಿಸಿ ನೋಡಿದರೆ ನನ್ನ ಪ್ರೇಯಸಿ ಆಗಲೇ ಸತ್ತು ಕಥೆ ಮುಗಿದಿತ್ತು. ಡಾಕ್ಟ್ರು ಮಕ್ಕಳಿಗೆ ಇಂಜಕ್ಷನ್ ಕೊಟ್ಟರು ಮತ್ತೆ ಏನೇನೋ ಮಾಡಿದರು, ಕೊನೆಗೆ ತಲೆ ತಗ್ಗಿಸಿಕೊಂಡು ಬ್ಯಾಗೆತ್ತಿಕೊಂಡು ಹೊರಟು ಹೋದರು. ಆ ತಾಯಿಯಂತೂ

ಚಿಟ್ಟನೆ ಚೀರೀ ಮೂರ್ಛೆ ಹೋದಳು. ಯಾರೋ ಹೋಗಿ ಅವರ ತಂದೆಯನ್ನ ಕರೆದುಕೊಂಡು ಬಂದರು, ಮನೆಯೆಲ್ಲ ಅಳುವೇ ಅಳು, ಜನ ಉಸುಕೊಳ್ಳುವವರು ಕೂತೇ ಇದ್ದರೆ, ಬಂದು ನೋಡಿಕೊಂಡು ಹೋಗುವವರು ಹೋಗುತ್ತಿದ್ದರು. ಎಲ್ಲರೂ ನಮ್ಮ ವಂಶವನ್ನೆ ಶಪಿಸುತ್ತಿದ್ದರು, ನನಗೋ ಪ್ರಿಯಸಿಯು ಕಳೆದು ಕೊಂಡ ದುಃಖ ಒಂದು ಕಡೆಯಾದರೆ ಆ ತಾಯಿಯ ರೋಧನವನ್ನು ಕೇಳಲಾ ಗಲಿಲ್ಲ ಈ ಮನೆಯೇ ಬೇಡ ಎಂದು ಹೊರ ಬಿದ್ದೆ ಹೇಗು ಕತ್ತಲಾಗಿತ್ತು ನೆಲದ ಮೇಲಿಯೇ ತೇವಳಿಕೊಂಡು ಓಡಿದೆ. ಅಲ್ಲಿ ಒಂದು ಮನೆ ಅಪೂರ್ಣವಾದದ್ದು ಪರ ವಾಗಿಲ್ಲ ಇಲ್ಲಿ ಮನುಷ್ಯರ ಕಾಟವೇ ಇಲ್ಲಾ ಸೊಳ್ಳೆ ಜಿರಳೆಗಳು ಸಾಕಷ್ಟು ಸಿಗು ತ್ತವೆ ಮನಸ್ಸಿಗೆ ಸಮಾದಾನ ತಂದುಕೊಂಡೆ, ಯಾರೇ ಸಾಯಲಿ ಬಿಡಲಿ ಹೊಟ್ಟೆಯ ಕೆಲಸ ಮಾತ್ರ ತಪ್ಪುವ ಹಾಗಿಲ್ಲ, ಒಂದೆರಡು ಸೊಳ್ಳೆ ಸಿಕ್ಕವು ತಿಂದೆ, ಹಾಗೂ ಹೀಗೂ ಕಾಲ ತಳ್ಳುತ್ತಿದ್ದೆ, ಹೊಟ್ಟೆಗೇನು ಕೊರತೆ ಇರಲಿಲ್ಲ, ಮುಂದೆ ಆ ಮನೆ ಕೆಲಸ ಪೂರ್ತಿಯಾಗಿ ಜನ ದಾಸಕ್ಕೆ ಬಂದರು. ನಾನು ಮಾತ್ರ ಅಡಿಗೆ ಮನೆ ಕಡೆ ಸುಳಿಯುತ್ತಲೇ ಇರಲಿಲ್ಲ, ಹಾಗೆಯೇ ಇನ್ನೆರಡು ದಂಪತಿ ಹಲ್ಲಿಗಳು ಬಂದವು. ನನಗೆ ಆ ಹಲ್ಲಿಯನ್ನು ನೋಡಿದಾಗ ನನ್ನ ಪ್ರೇಯಸಿಯ ನೆನಪಾಗುತ್ತಿತ್ತು. ಅವೆರಡು ತಮಾಷೆಯಾಗಿ ಜಾಡಾಡುವುದನ್ನು ಕಂಡು ನನಗೆ ನನ್ನ ಹಿಂದಿನ ದಿನದ ನೆನಪೇ ಆಗುತ್ತಿತ್ತು. ಈ ಮನೆಯಾತ ಬಹು ವಿಚಿತ್ರದ ಪ್ರಾಣಿ., ರಾತ್ರಿ ಮನೆಗೆ ತಡವಾಗಿ ಬರುತ್ತಿದ್ದ ಒಂದೊಂದು ದಿನವಂತೂ ಸತ್ತ ಸತೆಯೋ ಇರುತ್ತಿದ್ದ, ಕಾರಿನಿಂದ ಎತ್ತಿಕೊಂಡೇ ಬರುತ್ತಿದ್ದರು, ಕೂಗಾಟ ಚೀರಾಟ ಹೆಂಡತಿಯನ್ನು ವಿನಾಕಾರಣ ಬಡಿಯುವುದು, ಆಕೆ ನೋಡಲು ಚನ್ನಾ ಗಿದ್ದಳು, ರಾತ್ರಿಯಂತೂ ಅವಳು ಅಳುತ್ತಲೇ ಕಳೆಯುತ್ತಿದ್ದಳು, ಆಕೆ ಗೆಲು ವಾಗಿದ್ದ ದಿನವನ್ನೆ ನಾನು ನೋಡಲಿಲ್ಲ. ಅದರೆ ಆ ಹಿಂದಿನ ಮನೆಯವರು ಇಷ್ಟು ದೊಡ್ಡ ಮನೆ, ಸಾಮಾನು, ಕಾರು ಆಳುಗಳು ಯಾವುದೂ ಇರಲಿಲ್ಲ ಆಕೆ ಇಕೆ ಯಷ್ಟು ಚನ್ನಾಗಿಯೂ ಇರಲಿಲ್ಲ,ಆದರೆ ಎಷ್ಟೊಂದು ಸಂತೋಷವಾಗಿ ನಗುನಗುತ್ತಾ ಇರುತ್ತಿದ್ದರು, ನನಗೆ ಈ ಮನುಷ್ಯರ ವ್ಯವಹಾರವೇ ವಿಚಿತ್ರವಾಗಿ ತೋರುತ್ತದೆ. ಈ ಶ್ರೀಮಂತರ ಯಾಂತಿಕ ಜೀವನ, ಆ ಬಡವರ ಸಾತ್ವಿಕ ಜೀವನ, ನಾನು ನನ್ನ ಪ್ರಿಯಸಿಯನ್ನು ಕೇಳಿದ್ದೆ. ಎನೇ ನಿನಗೆ ಮನುಷ್ಯ ಭಾಷೆ ತಿಳಿಯುತ್ತಾ! ದುಡ್ಡು ಸ್ಕೂಲ್, ಸಾಲ ಸಾಮಾನು ಅಂತ ಎನೇನೋ ತಾಪತ್ರಯ ಪಟ್ಟು ಕೊಳ್ಳುತ್ತಾರೆ ಅಂದಿದ್ದಕ್ಕೆ ಅವಳು ಬಾಲ ಅಲ್ಲಾಡಿಸಿ, ಅಯ್ಯೋ ! ನನಗಂತೂ ಒಂದೂ ಗೊತ್ತಾಗುವುದಿಲ್ಲ, ಅಷ್ಟೇ ಯಾಕೆ ನಮ್ಮ ಹಲ್ಲಿ ವಂಶದವರಿಗೆ ಗೊತ್ತಾ ಗುವುದಿಲ್ಲ. ನೀ ಸುಮ್ಮನೇ ತಲೆ ಕೆಡಿಸಿಕೊಳ್ಳಬೇಡಾ ಬಾ ಎಂದು ಕರೆದುಕೊಂಡು ಹೋಗಿದ್ದಳು, ಈ ಮನೆಯಲ್ಲಿ ಹೀಗೆ ನಡೆಯುತ್ತಿರುವಾಗ ಮನೆಯಾತನ ಗೆಳೆ

ಯವನಂತೆ, ಮಧ್ಯಾಹ್ನ ಯಾರು ಇಲ್ಲ ಹೊತ್ತು ನೋಡಿ ಬರುವುದು ಗಂಟೆಗಟ್ಟಲೆ ಹರಟೆ ಹೊಡೆಯುತ್ತಾ ಕೂರುವುದು ನಡೆಯಿತು. ಒಂದು ದಿನ ಏನೇ ರೇಖಾ ನಿನಗೆ ನಿನ್ನ ಗಂಡನಿಂದ ಯಾವ ಸುಖವಿದೆ. ನಿನ್ನ ತಂದೆ ತಾಯಿಗಳು ಅವನ ಹುದ್ದೆ ನೋಡಿ ನಿನ್ನನ್ನು ಕೊಟ್ಟರೇ ವಿನಃ ಗುಣ ನೋಡಲಿಲ್ಲ, ಬೆಳಗಾಗೆದ್ದು ಕೆಲಸಕ್ಕೆ ಹೋಗುತ್ತಾನೆ ಸರಿ ರಾತ್ರಿಯಲ್ಲಿ ಕುಡಿದು ಹೆಣವಾಗಿ ಮನೆಗೆ ಬರುತ್ತಾನೆ ಅಲ್ಲಿ ಅವನು ಆಡದ ಆಟವಿಲ್ಲ, ಇವನ ದುಡ್ಡಿಗಾಗಿ ಹುಡುಗಿಯರ ಗುಂಪೇ ಸುತ್ತುವರೆದಿರುತ್ತೆ, ಇಲ್ಲಿ ನೀನು ಸನ್ಯಾಸಿಯಂತೆ ದಿನ ತಳ್ಳುತ್ತಿ, ಏನು ಪ್ರಯೋಜನ ಹೇಳು, ದುಡ್ಡಿದ್ದರೆ ಸುಖ ಸಿಗುತ್ತಾ, ಈ ವಯಸ್ಸಿನಲ್ಲಿ ನೀನು ಹೀಗಿರಬೇಕಾ? ನಿನ್ನ ಗಂಡನಿಗೆ ಬುದ್ದಿ ಬರುವಷ್ಟರೊಳಗೆ ನಿನ್ನ ಜೀವನ ಹಾಳಾಗಿಯೇ ಹೋಗುತ್ತದೆ. ನೋಡು... ನಾನೊಂದು ಮಾತು ಕೇಳುತ್ತೇನೆ ತಪ್ಪು ತಿಳಿಯಬೇಡಾ, ನನಗೆ ನಿನ್ನ ಮೇಲೆ ಮೊದಲಿನಿಂದಲೂ ಮನಸ್ಸಿದೆ. ನನ್ನ ಹತ್ತಿರ ನಿನ್ನ ಗಂಡನಷ್ಟು ದುಡ್ಡಿಲ್ಲದಿದ್ದರೂ ನಿನ್ನನ್ನು ಸುಖವಾಗಿಡುವಷ್ಟು ಚೈತನ್ಯವಿದೆ, ನೀನು ಸಂತೋಷವಾಗಿ ಒಪ್ಪಿಗೆ ಕೊಟ್ಟರೆ ಸಾಕು ಮುಂದಿನ ಸವಾಲನ್ನು ಧೈರ್ಯವಾಗಿ ಎದುರಿಸುವೆನು. ಪಾಪಿ ಮನುಷ್ಯನೇ ಅನಿಸಿತು ನನಗೆ ಅಕೆ ಅವನ ಮಾತಿನಿಂದ ಕಕ್ಕಾಬಿಕ್ಕಿಯಾಗಿ ಹೋಗಿದ್ದಳು, ಏ....ನು ಸುರೇಶ ನೀನು ಹೇಳುವ ಮಾತು, ಸದ್ಯ ನಾನು ಮಾಡಿದ ಕರ್ಮವನ್ನು ಅನುಭವಿಸುತ್ತಿದ್ದೇನೆ ಅವರಿಗೆ ಬುದ್ದಿ ಬಂದಾಗ ನೋಡಿದರಾಯ್ತು ಬಿಡಿ ಅಂದಳು. ಹುಚ್ಚಿ ... ಹುಚ್ಚಿ.... ಅವನಿಗೆ ಬುದ್ದಿ ಬರುವದ್ಯಾವಾಗ ಗೊತ್ತೆ? ಡಡ್ಡ ಯೌವನ ಕಳೆದುಕೊಂಡು ರೋಗದ ಗೂಡಾದಾಗ! ಆಗ ಅವನಿಗೆ ಬಂದ ಬುದ್ದಿಯಿಂದ ನಿನಗೇನು ಪ್ರಯೋಜನ ಹೇಳು? ಸುಮ್ಮನೇ ಮೂರ್ಖರಂತೆ ಮಾತಾಡಬೇಡ, ನೀನೂ ಓದಿದವಳು ಬಂದ ಸುಖವನ್ನು ಕಾಲಿನಿಂದ ತಳ್ಳಬೇಡಾ, ಯೋಚಿಸಿ ನೋಡು ಆಕೆಯ ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಲೇ ಇತ್ತು. ಸುರೇಶ ನನ್ನ ಬಾಳು ಬರೀ ಕತ್ತಲು ಕತ್ತಲು, ನೇರವಾಗುವ ಮಾರ್ಗವೇ ತೋರಲಿಲ್ಲಾ ನನಗೊಂದು ತೋಚುವುದಿಲ್ಲಾ ಸುರೇಶ ನನಗೊಂದು ತೋಚುವುದಿಲ್ಲಾ ಅಂತ ಮುಖ ಮುಚ್ಚಿ ಅಳಲು ಪ್ರಾರಂಭಿಸಿದಳು. ಅವನು ಅವಳ ಹತ್ತಿರ ಹೋಗಿ ಆಕೆಯ ಕೈ ಹಿಡಿದು, ಕಣ್ಣೀರನ್ನು ಒರೆಸಿ ರೇಖಾ! ನೀನು ಅಳುವುದನ್ನು ನನ್ನಿಂದ ನೋಡಲಾಗುವುದಿಲ್ಲ ನಿನ್ನನ್ನು ಈ ಪಂಜರದಿಂದ ಬಿಡುಗಡೆ ಮಾಡುತ್ತೇನೆ ನನ್ನನ್ನು ನಂಬು ಎಂದು ಆಕೆಯನ್ನು ಬಲವಾಗಿ ತಬ್ಬಿ ಮುಖದ ತುಂಬ ಚುಂಬನದ ಮಳೆಗರೆದ ಮುಂದೆ ಅವರಿಬ್ಬರ ಮಧ್ಯಾಹ್ನದ ಜಟ್ಟ ನಡೆದೇ ಇತ್ತು. ಒಂದು ದಿನ ಆಕೆಯ ಗಂಡನೆನಿಸಿಕೊಂಡ ಪ್ರಾಣಿ, ರಾತ್ರಿ ಕುಡಿದು ಬಂದು ಸಿಕ್ಕಾಪಟ್ಟೆ ಬಡಿದು ಹಾಸಿಗೆಯ ಮೇಲೆ ಬಿದ್ದುಕೊಂಡಾ ಅವಳ ತಲೆಗೆ ಬಾಗಿಲು ಬಡಿದು ರಕ್ತ ಧಾರಾಕಾರವಾಗಿ ಸುರಿ

ಯುತ್ತಿತ್ತು. ಅವಳು ತುಂಬ ಹೊತ್ತು ಅತ್ತು ಅತ್ತು ಸೆಲದ ಮೇಲೆ ಬಿದ್ದಳು. ಬೆಳಗಾಗೆದ್ದು ಆಕೆಯ ಗಂಡ ಕಾರು ತೆಗೆದುಕೊಂಡು ಹೋದಾ, ಅವನೂ ಮಾತಾಡಿಕಲಿಲ್ಲ, ಆಕೇನೂ ಮಾತಾಡಲಿಲ್ಲ, ಎಂದಿನಂತೆ ಮಧ್ಯಾನ್ಹ ಸುರೇಶ ಬಂದಾ, ರೇಖಾಳ ಅವತಾರ ನೋಡಿ ತುಂಬಾ ತಬ್ಬಿಬ್ಬಾಗಿ ಹೋದ, ರೇಖಾ! ಆ ಪ್ರಾಣಿಯನ್ನು ಕಟ್ಟಿಕೊಂಡು ನಿನಗೆ ಸುಖವಂತೂ ಇಲ್ಲಾ, ಕೊನೆಗೆ ನಿನ್ನ ಪಾಲಿಗೆ ಸನ್ನನ್ನೂ ಬಿಡವುದೂ ಇಲ್ಲಾ. ಈ ಮುಳ್ಳನ್ನು ತೆಗೆಯಲೇ ಬೇಕು, ನಿನ್ನ ಅವಸ್ಥೆ ನೋಡಲಾರೆ, ಆ ಕೆಲಸ ಈವತ್ತೆ ಮುಗಿದು ಹೋಗಲಿ ಅಂದನು. ಅಯ್ಯೊ... ನನಗೆ ಏನಾದರೂ ಕೊಟ್ಟು ಬಿಡಿ ಸತ್ತು ಹೋಗುತ್ತೇನೆ ಸುಮ್ಮನೆ ಏನೋ ಮಾಡಲು ಹೋಗಿ ಏನೋ ತಾಪತ್ರಯ ಅನುಭವಿಸುವಂತಾಗಬಾರದು, ಖೇದದಿಂದ ನೀ ಸುಮ್ಮನಿರು ರೇಖಾ, ಭಯ ಬೇಡ ನಾನು ಎಲ್ಲವನ್ನು ಬುದ್ಧಿ ವಂತಿಕೆಯಿಂದಲೇ ಸಾಗಿಸುತ್ತೇನೆ ಅನ್ಯಾಯಕ್ಕೆ ಒಂದು ಮಿತಿ ಬೇಡವೇ ? ನಿನ್ನ ತಾಯಿ ಮನೆಯವರು ಒಂದು ಸ್ಕೂಟರ್ ಕೊಡಲಿಲ್ಲವೆಂದ ಮಾತ್ರಕ್ಕೇ ನಿನ್ನನ್ನು ಹೀಗೆ ಚಿತ್ರ ಹಿಂಸೆಗೆ ಗುರಿ ಮಾಡುವುದೇ ಈಗ ಮನೆ ಕೆಲಸವನ್ನು ಸಹ ನೀನೆ ಮಾಡಿಕೊಳ್ಳಬೇಕ. ಇಷ್ಟು ದೊಡ್ಡ ಮನೆ ಆಳು ಕಾಳುಗಳನ್ನೆಲ್ಲ ಬಿಡಿಸಿದ್ದಾನೆ ನೀನು ಈ ನಾಲ್ಕು ವರ್ಷ ಈ ಚಿತ್ರ ಹಿಂಸೆಯನ್ನು ಹ್ಯಾಂಗೆ ಸಹಿಸಿದೆ ಹೇಳು? ಅವನಿಗೆ ದೇವರು ಯಾತಕ್ಕೆ ಕಡಿಮೆ ಮಾಡಿದ್ದಾನೆ ಈ ದುರಹಂಕಾರವೆಲ್ಲ ದುಡ್ಡಿ ನದು ತಿಳಿಯಿತೆ? ಹಾವು ಚೇಳಿನ ವಿಷವನ್ನಾದರೂ ಇಳಿಸಬಹುದು, ಈ ಶ್ರೀಮಂತಿ ಕೆಯ ವಿಷವನ್ನು ಮಾತ್ರ ಯಾರೂ ಇಳಿಸಲಾರರು, ಅದನ್ನಿಳಿಸಲು ಬಡತನ ವೊಂದೇ ಮದ್ದು

ಸುರೇಶ! ಅವರ ಕಥೆ ಏನಾದರೂ ಆಗ ನನ್ನನ್ನು ಈ ಜೇಲಿನಿಂದ ಹೊರಗೆ ಕರೆದುಕೊಂಡು ಹೋಗು ಅಷ್ಟೇ ಸಾಕು! ಅಂದಳು ಸೋತು ಸೊರಗಿ, ರೇಖಾ! ನಿನ್ನನ್ನು ಅವನು ಅಷ್ಟು ಸುಲಭವಾಗಿ ಬಿಟ್ಟುಕೊಡುವನೆಂದುಕೊಂಡಿರುವೆಯೋ ? ಈ ಹೊತ್ತು ಅವನ ಕಥೆ ಮುಗಿಸಿಯೇ ಬಿಡುತ್ತೇನೆ ನೋಡುತ್ತಿರು ಅನ್ನುತ್ತ ಬಿರ ಬಿರನೇ ಹೊರಟು ಹೋದನು. ಆಕೆ ಅಲ್ಲಿಯೇ ದಿನವೆಲ್ಲ ಬಿದ್ದುಕೊಂಡಿದ್ದಳು, ಸಾಯಂಕಾಲ ಆಕೆಯ ಗಂಡ ಬರುವುದಕ್ಕಿಂತ ಅರ್ಧ ಗಂಟೆ ಮುಂಚೆ ಬಂದು ಅವಳಿಗೆ ಎಷ್ಟೋ ಸರಿಯಿಂದ ಸಮಾಧಾನ ಹೇಳಿದ' ನೋಡು ರೇಖಾ! ಈ ಚೀಟಿ ನಲ್ಲಿಯ ಪುಡಿಯನ್ನು ಸ್ವಲ್ಪ ನೀರಿನಲ್ಲಿ ಬೆರಸಿ ಕೊಟ್ಟು ಬಿಟ್ಟರೆ, ಅವನು ಅಲ್ಲೇ ಖತಂ, ಯಾವ ಡಾಕ್ಟ್ರಿಗೂ ಗೊತ್ತಾಗುವುದಿಲ್ಲ, ಹಾರ್ಟಫೇಲ್ ಗೊತ್ತಾ, ಹಾರ್ಟಿ ಲ್ಲದ ಮನುಷ್ಯನಿಗೆ, ಅಷ್ಟರಲ್ಲಿ ಕಾರು ಬಂದ ಶಬ್ದವಾಯ್ತು ಇವನು ಹಿಂದಿನ ಕೋಣೆಯಲ್ಲಿ ಬಚ್ಚಿಟ್ಟುಕೊಂಡಾ, ಆ ಗಂಡನನ್ನು ಡ್ರೈವರ್ ಸಹಾಯದಿಂದ ಹೆಣ ದಂತೆ ತಂದು ಹಾಸಿಗೆಯ ಮೇಲೆ ಹಾರ ಮಲಗಿಸಿದಳು ಸುರೇಶ ಆ ಪುಡಿಯನ್ನು

ಗ್ಲಾಸಿನಲ್ಲಿ ಕಲೆಸಿ ಹಾಕಲು ಹೋಗುತ್ತಿದ್ದತ್ತ ಆಗ ಆಕೆ, ಸುರೇಶ! ತನ್ನಿ ಇಲ್ಲಿ ಆ ಗ್ಲಾಸು ನಾನೇ ಹಾಕುತ್ತೇನೆ ಆ ಪಾಪ ನಮಗ್ಯಾಕೆ ಎಂದು ಆ ಕಪ್ಪನ್ನು ಒಳಗೆ ತೆಗೆದುಕೊಂಡು ಹೋಗಿ ತಾನೇ ಕುಡಿದ ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದಳು. ಸುರೇಶನಿಗೆ ಒಮ್ಮೆಲೆ ದಿಗಿಲಾಯಿತು ಏನಾಯ್ತಿದು ರೇಖಾ! ನಿನ್ನೇನು ಮಾಡಿದೆ ಆ ಪಾಪಿಗೆ ಈ ಶಿಕ್ಷೆ ಆಗ ಬೇಕಿತ್ತು ಸುರೇಶ! ಪಾಪಿ ಚಿರಾಯು; ಅವನು ಬದುಕಲಿ ಯಾವುದೋ ಪಾಪಕ್ಕೆ ಈ ಜನ್ಮದಲ್ಲಿ ಇದನ್ನೆಲ್ಲ ಅನುಭವಿಸಿದೆ ಸುಖದ ಭ್ರಾಂತಿಯಲ್ಲಿ ಹಾದಿ ತಪ್ಪಿದೆ, ಆತ್ಮಸಾಕ್ಷಿಗೆ ವಿರುದ್ಧವಾಗಿ ಎಷ್ಟು ದಿನ ಹೋರಾಡಲಾದೀತು, ಇನ್ನು ಬದುಕಿದ್ದರೆ ಪಾಪದ ಹೊರೆ ಹೆಚ್ಚುತ್ತಲೇ ಹೋಗುತ್ತದೆ. ದೇವರು ಈವತ್ತು ನನ್ನ ಸಕಲ ಕಷ್ಟಗಳು ದೂರಾಗುವ ಅವಕಾಶ ಒದಗಿಸಿಕೊಟ್ಟ' ಸುರೇಶ ನಿನ್ನ ಭವಿಷ್ಯಕ್ಕೆ ರೂಪು ಕೊಡಲು ನೂರಾರು ಅವಕಾಶಗಳಿವೆ, ನೀನು ಗಂಡಸು ಈ ಘಟನೆಯ ತೊಡಕಿನಲ್ಲಿ ಸಿಕ್ಕಿ ಹಾಕಿಕೊಳ್ಳಬೇಡಾ ಬೇಗ ನೀನು ಮನೆ ಬಿಟ್ಟು ಹೋಗು, ನಾನೆಲ್ಲ ಯಾರಿಗೂ ತೊಡಕಾಗದಂತೆ ಚೀಟೀ ಬರೆದಿದ್ದೇನೆ, ಈ ಪಾಪಿಯನ್ನು ಮರೆತು ಬಿಡು ಎಂದು ಕತ್ತು ಚೆಲ್ಲಿದಳು ಅವನು ಗಾಬರಿಯಾಗಿ ಅಲ್ಲಿಂದ ಕಾಲ್ತೆಗೆದ, ಬೆಳಗ್ಗೆ ಪೋಲಿಸರು ಬಂದರು ನೆಂಟರಿಷ್ಟರು ಬಂದರು, ಆ ಕುಡುಕ ಗಂಡ ಇನ್ನು ಅಮಲಿನಲ್ಲಿಯೆ ಇದ್ದಂತೆ ಕುಳಿತಿದ್ದ, ನನಗೆ ಮಾತ್ರ ಈ ಮನುಷ್ಯ ಸಹವಾಸ ಸಾಕೆನಿಸಿತ್ತು. ಆ ಹೊತ್ತೆ ಬಂದು ಈ ಪುರಸೇರಿಕೊಂಡೆ, ಆದರೂ ಆಗಾಗ ಎಲ್ಲ ನೆನಪಾಗುತ್ತಿರುತ್ತೆ. ●

---

ಸಟೆಪಿಟವೆಂಬುವೆರಡು ಪಿಡಿದು ನಡೆವುದೀ ಲೋಕವೆಲ್ಲವು. ಸಟೆದಿಟವೆಂಬುವೆರಡ ಪಿಡಿದು ನಡೆವ ಲೋಕದೊಡನೆ ಶರಣನು ಗುರುಲಿಂಗಜಂಗಮದಲ್ಲಿ ಸಟೆಯ ಬಳಸಿದೊಡೆ, ಆತನು ತ್ರಿವಿಧಕ್ಕೆ ದ್ರೋಹಿ, ಅಘೋರನರಕಿ, ಉಂಬುದೆಲ್ಲ ಕಿಲ್ಬಿಷ, ತಿಂಬುದೆಲ್ಲ ಅಡಗು, ಕುಡಿವುದೆಲ್ಲ ಸುರೆ ಹುಸಿ ಎಂಬುದೇ ಹೊಲೆ. ಶಿವಭಕ್ತಂಗೆ ಹುಸಿ ಎಂಬುದುಂಟೇ ಅಯ್ಯಾ? ಹುಸಿಯನಾಡಿ ಲಿಂಗವ ಪೂಜಿಸಿದಡೆ, ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ ಚನ್ನಮಲ್ಲಿಕಾರ್ಜುನಾ.

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ, ಹಲವು ಪ್ರಾಣಿಯ ಕೊಂದು ನಲಿನಲಿದಾಡುವ. ತನ್ನ ಮನೆಯಲೊಂದು ಶಿಶುವು ಸತ್ತಡೆ, ಅದಕ್ಕೆ ಮರುಗುವಂತೆ ಅವಕೇಕೆ ಮರುಗನು? ಅದೆಂತೆಂದೊಡೆ? ಸ್ವಾತ್ಮನಾಮಿತರಶ್ಚೈವ ದೃಷ್ಟ್ವಾವ ನಿತ್ಯಾದಿ ಭಿನ್ನತೆ। ಸರ್ವಂ ಜಿಜ್ಞ್ಯೇತಿರೇವೇತಿ ಯಃ ಪಶ್ಯತಿ ಸ ಪಶ್ಯತಿ॥ ಎಂದುದಾಗಿ ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ ಇದು ಕಾರಣ ಚನ್ನಮಲ್ಲಿಕಾರ್ಜುನನ ಭಕ್ತನಾಗಿರ್ದು ಜೀವ ಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ?

—ಅಕ್ಕಮಹಾದೇವಿ

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣಬಂಧು,

ಕೆರೆಗೋಡು–ರಂಗಾಪುರ ಒಂದು ಪುಣ್ಯಕ್ಷೇತ್ರ. ಶ್ರೀಶ್ರೀ ಪರದೇಶಿಕೇಂದ್ರ ಸ್ವಾಮಿಗಳ ತಪೋಭೂಮಿ. ವೀರಶೈವ ಮತ್ತು ಮಾಧ್ವ ಸಂಪ್ರದಾಯದ ಗದ್ದುಗೆಗಳು ಶ್ರೀ ಕ್ಷೇತ್ರದಲ್ಲಿದ್ದು ಭಕ್ತ ಸಮೂಹವನ್ನಾಕರ್ಷಿಸುತ್ತಿವೆ. ಭಕ್ತ ರಾಜ ರಾಮ್‌ಸಿಂಗ್‌ರ ಅಸೀಮ ಭಕ್ತಿಯ ಕೈಂಕರ್ಯ ನಡೆದುಬಂದ ಪುಣ್ಯಭೂಮಿ. ಅಲ್ಲಿನ ಶರಣಬಂಧುಗಳೊಬ್ಬರ ವಿಶೇಷ ಆಸಕ್ತಿ ಅಭಿಮಾನಗಳಿಂದಾಗಿ ಬಸವ ಜಯಂತಿ ಅನುವಾಯಿತು. ದಿನಾಂಕ 24-3-86 ರಂದು ಭಕ್ತಿಯ ಕರೆಯಂತೆ ಪರಮಪೂಜ್ಯ ಶ್ರೀ ಶ್ರೀ ಗಳವರು ಬಸವ ಜಯಂತಿ ಆಚರಣೆಗೆ ಅಪ್ಪಣೆ ಮಾಡಿದರು.

ತಿಪಟೂರು ಕಲ್ಪವೃಕ್ಷಗಳು ನಾಡು. ಕಾಯಿ ಕೊಬರಿಗಳ ಹೇರಳ ಸಂಪತ್ತು ಧನಾಢ್ಯರು ಸುತ್ತ ಮುತ್ತ ಗ್ರಾಮಗಳಲ್ಲಿ, ರಂಗಾಪುರವೂ ಅಂತಹದೊಂದು ಪುಣ್ಯ ಗ್ರಾಮ. ಅಲ್ಲಿನ ಶರಣ ಬಂಧುವಿನ ಸೇವೆ ಗ್ರಾಮಸ್ಥರ ಸಹಕಾರ. ಸಂಜೆ 6-30 ಘಂಟೆಗೆ ಸಮಾರಂಭ ಪ್ರಾರಂಭವಾಯಿತು ಸ್ವಾಗತಿಸುತ್ತ ತಿಪಟೂರಿನ ಶಾಸಕರು ನಂಜುಂಡಪ್ಪನವರು ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳು ಕೈಗೊಂಡಿರುವ ಬಸವ ಪ್ರಚಾರ ಮಹಾಮಣಿಹದ ಪರಿಚಯ ಮಾಡಿಕೊಟ್ಟರು.

ಸಭೆಯಲ್ಲಿ ಮಾಜಿ ಶಾಸಕರಾದ ಶ್ರೀ ವಿ ಎಲ್. ಶಿವಪ್ಪನವರು ಮಾತನಾಡುತ್ತ ಪೂಜ್ಯ ಶ್ರೀ ಶ್ರೀಗಳವರ ನಿರಂತರ ಕಾಯಕ ಮತ್ತು ದಾಸೋಹದ ಜೊತೆಗೆ ಬಸವ ತತ್ವಪ್ರಚಾರ ನಡೆದಿರುವುದು ಸಮಾಜದ ಪುಣ್ಯ ಎಂದರೆ ಮತ್ತೊಬ್ಬ ಮಾಜಿ ಶಾಸಕರಾದ ಶ್ರೀ ಎಸ್ ಪಿ ಗಂಗಾಧರಪ್ಪನವರು ಮಾತನಾಡುತ್ತ ಬಸವಾದಿ ಶರಣರ ಸಂದೇಶ ಸಮಾಜದ ಅಭಿವೃದ್ಧಿಗೆ ಹಾದಿಯಾಗಲಿ ಎಂದರಲ್ಲದೆ, ಮುಂದು-ವರಿದು ಸಿದ್ಧಗಂಗಾಕ್ಷೇತ್ರ ಇಡೀ ಭರತಖಂಡದಲ್ಲಿ ಹೆಮ್ಮೆಯ ಕ್ಷೇತ್ರವೆಂದರು. ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಸಮಾಜದ ಬಹು ದೊಡ್ಡ ಅಮೂಲ್ಯ ಸಂಪತ್ತು ಎಂದು ನುಡಿದರು.

ಬಸವಣ್ಣ ಸಾಂಸಾರಿಕ ಸನ್ಯಾಸಿ, ಗೃಹಸ್ಥಸ್ವಾಮಿ. ಜೀವನಯೋಗಿ, ಸಂಸಾರವನ್ನೇ ಶಿವಯೋಗವಾಗಿ ಮಾರ್ಪಡಿಸಿದ ಮಹಾ ಪವಾಡ ಪುರುಷ. ಆ

ಪುಣ್ಯ ಮೂರ್ತಿಯ ಸ್ಮರಣೆಯಿಂದಲೇ ಅಂಟಿದ್ದ ಅನೇಕ ಪಾಪಕರ್ಮಗಳು ಪರಿಹಾರವಾಗುತ್ತವೆ. ಮಹಾ ಕಾರುಣ್ಯ ಸಾಗರ. ವರ್ಣಾಶ್ರಮ ಧರ್ಮದ ವಿರುದ್ಧ ಸೆಟೆದು ನಿಂತ ಏಕೈಕ ಧೀಮಂತ. ಪುರೋಹಿತಶಾಹಿ, ರಾಜ್ಯಶಾಹಿಗಳೆರಡನ್ನು ಪ್ರತಿಭಟಿಸಿದ ಅಸಾಮಾನ್ಯ ವ್ಯಕ್ತಿ. ರಾಜಕೀಯದಲ್ಲಿದ್ದೂ ಪರಿಶುದ್ಧವಾಗಿ ಜೀವಿಸಬಹುದೆಂಬುದನ್ನು ನಡೆದು ತೋರಿಸಿದ ಪುಣ್ಯಾತ್ಮ. ಆತನ ವಚನಗಳ ತುಂಬಾ ಅಂತರಂಗದ ಧ್ವನಿಯನ್ನು ಕೇಳಬಹುದು. ಹರಿಜನರ ಬಗ್ಗೆ ಆತನಷ್ಟು ಮನಕರಗಿ, ಎದೆಗಪ್ಪಿಕೊಂಡ ಇನ್ನೊಬ್ಬರು ಸಿಕ್ಕಲಾರರು. ಆದರೆ ಸಮಾಜದ ದುರ್ದೈವ ಆ ಮಹಾನುಭಾವನನ್ನು ಅರ್ಥ ಮಾಡಿಕೊಂಡು ಮುಂದೆ ಆವನ ದಾರಿಯಲ್ಲಿ ನಡೆಯಲಿಲ್ಲ. ಜಗತ್ತಿಗೆ ಆ ಮಹಾಪುರುಷನ ಪರಿಚಯ ಮಾಡಿಕೊಡಲಿಲ್ಲ. ಇಂದು ಪೂಜ್ಯ ಶ್ರೀ ಶ್ರೀಗಳು ಬಸವಣ್ಣನವರ ತತ್ವ ಪ್ರಚಾರಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡು ನಡೆದಿದ್ದಾರೆ. ಹಳ್ಳಿ ಹಳ್ಳಿಗೆ ಬಸವ ವಚನಗಳನ್ನು ಮುಟ್ಟಿಸುವ ಮಹಾಮಣಿಹ ಅವರದಾಗಿದೆ ಎಂಬುದಾಗಿ ಶ್ರೀ ಸಿದ್ಧಗಂಗಾ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಉಪನ್ಯಾಸ ಮಾಡಿದರು.

ತಮ್ಮ ಇತಿಮಿತಿಯಲ್ಲಿ, ಶುದ್ಧ ಹೃದಯದಂಗಳದಲ್ಲಿ, ಮುಗ್ಧ ನುಡಿಗಳಲ್ಲಿ ಬಸವಣ್ಣನವರನ್ನು ಆರಾಧಿಸಿದ ಜನಪದದ ಹಾಡುಗಳ ಮೂಲಕ ಬಸವಣ್ಣ ಮಾಡಿದ ಸುಧಾರಣೆಯ ನೈಜ ಚಿತ್ರವನ್ನು ಶ್ರೀ ಹೆಚ್. ವಿ. ವೀರಭದ್ರಯ್ಯನವರು ಬಿಡಿಸಿದರು.

ಪೂಜ್ಯ ಶ್ರೀ ಶ್ರೀ ಪರದೇಶಿಕೇಂದ್ರ ಸ್ವಾಮಿಗಳ ಆಶೀರ್ವಚನದ ನಂತರ, ಪರಮ ಪೂಜ್ಯ ಶ್ರೀ ಶ್ರೀಗಳವರು ಅಧ್ಯಕ್ಷ ಪೀಠದ ಅನುಗ್ರಹ ಭಾಷಣ ಮಾಡುತ್ತ, ಬಸವಣ್ಣನವರು ವಿಶ್ವ ಮಾನವ, ವಿಶ್ವಬಂಧು ಎಂದರು. ಮುಂದುವರಿದು ಅವರು ನೀಡಿದ ಕಾಯಕ ಮತ್ತು ದಾಸೋಹ ತತ್ವ ಇಡೀ ಮನುಕುಲಕ್ಕೆ ಸರ್ವಕಾಲಿಕ ತಾರಕಮಂತ್ರ. ವ್ಯಕ್ತಿಯ ಪರಿಶುದ್ಧ ಜೀವನ ಸಮಾಜದ ಆಸ್ತಿ. ಬಸವಣ್ಣನವರಂಥ ಮಹಾನುಭಾವರನ್ನು ಪಡೆದ ಸಮಾಜ ಇಂದು ವಿಘಟಿತವಾಗುತ್ತಿರುವುದು ನಿಜಕ್ಕೂ ಶೋಚನೀಯ ಎಂದರು.

ರಾತ್ರಿ 10-30 ಘಂಟೆಗೆ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶಿತವಾಯಿತು ಸುಮಾರು ಹತ್ತು ಸಾವಿರಮಂದಿ ನಾಟಕ ನೋಡಿ ಆನಂದಿಸಿದರು. ಕಂಜೀಘಟ್ಟದ ಹಿರಿಯರೊಬ್ಬರು ಬಸವಣ್ಣನ ಪಾತ್ರಧಾರಿಯನ್ನು ಕಂಡು ಕಾಲು ಮುಟ್ಟಿ ನಮಸ್ಕರಿಸಬೇಕೆಂದು ಚಡಪಡಿಸುತ್ತಿದ್ದರು.

(ಮತ್ತೆ ಬರೆಯುತ್ತೇನೆ)

ಸಿದ್ಧಗಂಗಾ ಕ್ಷೇತ್ರದ ಪ್ರಸ್ತುತ ಕಲಹ ಹಾಗೂ ಕಾತರದ ವಾತಾವರಣ ಹೆಚ್ಚು ಕಾಲ ಇರಲು ಸಾಧ್ಯವಿಲ್ಲ, ಅದು ಕ್ಷೇಮವೂ ಅಲ್ಲ, ಈ ಸಂಬಂಧ ಮಠದ ಬಗ್ಗೆ ಅಭಿಮಾನವಿರುವ ನಾಡಿನ ಅನೇಕ ಮಠಾಧೀಶರ, ಸಾಹಿತಿಗಳು ಸಮಾಜ ಪ್ರಮುಖರು, ಹಳೆಯ ವಿದ್ಯಾರ್ಥಿಗಳು-ಮೊದಲಾದವರಲ್ಲಿ ನಾವು ಗಂಭೀರವಾಗಿ ಸಮಾಲೋಚನೆ ಮಾಡಿದ್ದೇವೆ. ಅವರೆಲ್ಲರೂ ಮಠಕ್ಕೆ ಬಂದೊದಗಿರುವ ಸಂದಿಗ್ಧ ಪರಿಸ್ಥಿತಿಯ ಬಗ್ಗೆ ಕಾತರ ವ್ಯಕ್ತಪಡಿಸಿದ್ದಾರೆ. ಮಠಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಘಟನೆಗಳು ಮತ್ತು ನಾವು ವಿಚಾರವಂತರೊಡನೆ ನಡೆಸಿರುವ ಸಮಾಲೋಚನೆಯನ್ನು ಗಮನದಲ್ಲಿಟ್ಟುಕೊಂಡು ಮಠದ ಪರಂಪರೆಯ ರಕ್ಷಣೆಗೆ ಮತ್ತು ಭವಿಷ್ಯಕ್ಕೆ ಅಗತ್ಯವಾದ ಸೂಕ್ತ ನಿರ್ಧಾರವೊಂದನ್ನು ಆದಷ್ಟು ಶೀಘ್ರವಾಗಿ ಕೈಗೊಳ್ಳುತ್ತೇವೆ. ಈ ಬಗ್ಗೆ ಯಾರಿಗೂ ಸಂಶಯ ಬೇಡ.

ಆದರೆ ಯಾವ ಕಾರಣದಿಂದಲೂ ಮಠದ ಶಾಂತಿಗೆ ಧಕ್ಕೆಯಾಗುವಂತಹ ಮತ್ತು ಇಲ್ಲಿರುವ ವಿದ್ಯಾರ್ಥಿಗಳ ಅಭ್ಯಾಸಕ್ಕೆ ಅಡ್ಡಿಯುಂಟುಮಾಡುವಂತಹ ಚಟುವಟಿಕೆಗಳಲ್ಲಿ ಯಾರೂ ತೊಡಗಬಾರದು. ಮಠದ ಅಭಿಮಾನಿಗಳಾಗಿರುವ ಎಲ್ಲರೂ ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಸಮಸ್ಯೆ ಪರಿಹಾರಕ್ಕೆ ಅವಕಾಶ ಮಾಡಿ ಕೊಡಬೇಕು.

ಈಗ ವಾತಾವರಣವು ಕೊಂಚ ಕಲುಷಿತವಾಗಿದ್ದರೂ ಶ್ರೀ ಮಠದ ದೈನಂದಿನ ಚಟುವಟಿಕೆಗಳು ವಿದ್ಯಾರ್ಥಿನಿಲಯ ಮತ್ತು ವಿದ್ಯಾಸಂಸ್ಥೆಗಳು ಕ್ರಮವಾಗಿ ನಡೆಯುತ್ತಿವೆ. ಅಂತೆಯೇ ಯಾವುದೇ ವಿಧವಾದ ಉದ್ವೇಗ ಭಾವಾವೇಶಗಳಿಗೆ ಅವಕಾಶಕೊಡದೆ ಸರ್ವರೂ ಸಂಯಮದಿಂದ ವರ್ತಿಸಿ ಸಹಕರಿಸಬೇಕಾಗಿ ಅಪೇಕ್ಷಿಸಲಾಗಿದೆ.

ಶ್ರೀ ಶಿವಕುಮಾರ ಸ್ವಾಮಿಗಳು.

# "ಸಿದ್ಧಗಂಗಾ" ಚಿರಾಯುವಾಗಲೆಂದು ಹರಸಿ ಹಾರೈಸಿರುವವ ಆಜೀವ ಸದಸ್ಯರ ಬಳಗ

ಶ್ರೀಯುತರಾದ

1141 ಕೆ. ಎಸ್. ಕೆಂಪಯ್ಯ, ಕನಕೇನ ಹಳ್ಳಿ, ಮಾಗಡಿ ||ತಾ|| ಬೆಂಗಳೂರು ಜಿಲ್ಲೆ.

1142 ಬೈಲಯ್ಯ, ಪಾಲನ ಹಳ್ಳಿ, ಮಾಗಡಿ ||ತಾ|| ಬೆಂಗಳೂರು ಜಿಲ್ಲೆ.

1143 ಟಿ. ಎಸ್. ಗೋವಿಂದರಾಜು, ಶಾಂತಪುರ, ಮಾಗಡಿ ||ತಾ|| ಬೆಂಗಳೂರು ಜಿಲ್ಲೆ.

1144 ಎಂ. ಜಿ. ಚನ್ನಯ್ಯ, ಎಣ್ಣೆಗೆರೆ, ಮಾಗಡಿ ||ತಾ||, ಬೆಂಗಳೂರು ಜಿಲ್ಲೆ

1145 ಹೊಸಳಯ್ಯ, ಬಿ. ಡಿ. ಸಿ. ಸಿ. ಬ್ಯಾಂಕ್, ಮಾಗಡಿ ||ತಾ||, ಬೆಂಗಳೂರು ಜಿಲ್ಲೆ.

1146 ಸದಾಶಿವಯ್ಯ, ಗಂಗೇನಪುರ, ಮಾಗಡಿ ||ತಾ||, ಬೆಂಗಳೂರು ಜಿಲ್ಲೆ.

1147 ಎಸ್. ಗಂಗಮಲ್ಲಯ್ಯ, ಶಿಕ್ಷಕರು, ಪಾಲನ ಹಳ್ಳಿ, ಮಾಗಡಿ ||ತಾ||, ಬೆಂಗಳೂರು ಜಿಲ್ಲೆ.

1148 ಪಟೇಲ್ ಮಲ್ಲೇಗೌಡ, ಸಸಿವಾಳ, ಅರಸೀಕೆರೆ ||ತಾ||, ಹಾಸನ ಜಿಲ್ಲೆ

1149 ಎಸ್. ಮಲ್ಲಿಕಾರ್ಜುನ, ಎಂ. ಎ, ಬಿ ಇಡಿ, ಮತ್ತಿಪುರ, ಕೊಳ್ಳೆಗಾಲ ||ತಾ||, ಮೈಸೂರು ಜಿಲ್ಲೆ

1150 ಎಸ್. ಆರ್. ಶಿವಸ್ವಾಮಿ ಅಂಡ್ ಸನ್ಸ್ S/o ಶ್ರೀ ರಂಗೇಗೌಡ ಪ್ರೊ|| ನಂಜುಂಡೇಶ್ವರ ರೈಸ್ ಮಿಲ್, ಹಳೆಸೋಸಲೆ ಟಿ. ಎಸ್. ಪು ||ತಾ||, ಮೈಸೂರು ಜಿಲ್ಲೆ.

1151 ಎಸ್. ಪ್ರಸನ್ನಮೂರ್ತಿ ಅಂಡ್ ಸನ್ಸ್, ಪೆಟ್ರೋಲ್ ಬಂಕ್ ಮಾಲೀಕರು ಟಿ. ನರಸೀಪುರ, ಮೈಸೂರು ಜಿಲ್ಲೆ

1152 ವೈ ಎಸ್. ಯಜಮಾನಪ್ಪ, ಅಂಡ್ ಸನ್ಸ್ ಎಕ್ಸಿಕ್ಯುಟೀವ್ ಇಂಜಿನಿಯರ್, ಸಿದ್ಧಾರ್ಥ ಲೇಔಟ್ ಮೈಸೂರು.

1153 ಟಿ. ಎಸ್. ನಂಜುಂಡಪ್ಪ ಅಂಡ್ ಸನ್ಸ್, ಮರ್ಚೆಂಟ್ಸ್, ಕ್ಯಾಪುರ, ನಂಜನಗೂಡು ||ತಾ||, ಮೈಸೂರು ಜಿಲ್ಲೆ.

(ಮುಂದುವರಿಯುತ್ತದೆ)